KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಫೆಬ್ರವರಿ ೨೫, ೨೦೧೦ (ಫಾಲ್ಗುಣ ೬, ಶಕ ವರ್ಷ ೧೯೩೧) | ಸಂಚಿಕೆ ೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಶ್ರೀ ಕೆ.ಮುರಳೀಧರ, ತಹಶೀಲ್ದಾರ್, ಉಡುಪಿ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮದ ಆದೇಶವನ್ನು ಹಿಂದಕ್ಕೆ ಪಡೆಯುವ ಬಗ್ಗೆ

**ಓದಲಾಗಿದೆ :**
1. ಅಪರ ನಿಬಂಧಕರು,ವಿಚಾರಣೆಗಳು–9 ಕರ್ನಾಟಕ ಲೋಕಾಯುಕ್ತ ಇವರ ಅ.ಸ.ಪತ್ರ ಸಂಖ್ಯೆ: ಕಂಪ್ಲೆಂಟ್/ಲೋಕ್/ಎಂವೈಎಸ್/447/2005/ಅ.ನಿ.ವಿ.–9 ದಿನಾಂಕ: 20–10–2008.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 56 ಎಡಿಇ 2008 ದಿನಾಂಕ: 26–12–2008.
3. ಶ್ರೀ ಕೆ. ಮುರಳೀಧರ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ,ಉಡುಪಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿ ದಿನಾಂಕ: 9–11–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ದಿನಾಂಕ: 20–10–2008 ರಲ್ಲಿ ಅಪರ ನಿಬಂಧಕರು, ವಿಚಾರಣೆಗಳು–9, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಕೆ. ಮುರಳೀಧರ, ತಹಶೀಲ್ದಾರ್,ಉಡುಪಿ ತಾಲ್ಲೂಕು ಇವರ ವಿರುದ್ಧ ದಿನಾಂಕ: 28–10–2005 ರಂದು ಫಿರ್ಯಾದುದಾರರಾದ ಶ್ರೀ ವಾಸುದೇವ ಅಡಿಗ, ಉಡುಪಿ ತಾಲ್ಲೂಕು ಇವರು ಉಡುಪಿ ತಾಲ್ಲೂಕು ವಂಡಾರು ಗ್ರಾಮದ ಸರ್ವೆ ನಂ. 30/07 ಹಾಗೂ ಇನ್ನಿತರ ಜಮೀನಿಗೆ ಸಂಬಂಧಪಟ್ಟಂತೆ ಕಾನೂನು ಬಾಹಿರವಾಗಿ ಆದೇಶ ಮಾಡಿರುತ್ತಾರೆ ಎಂದು ಮಾನ್ಯ ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರಿಗೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರನ್ನು ಪರಿಶೀಲಿಸಿ ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ದಿನಾಂಕ : 20–10–2008 ರ ವರದಿ ಹಾಗೂ ಸಂಬಂಧಿಸಿದ ದಾಖಲಾತಿಗಳನ್ನು ಸರ್ಕಾರಕ್ಕೆ ಕಳುಹಿಸಿಕೊಡುತ್ತಾ ಕರ್ನಾಟಕ ಲೋಕಾಯುಕ್ತ ಅಧಿನಿಯಮ ಕಲಂ 7(2) ರನ್ವಯ ಪ್ರಾರಂಭಿಕ ತನಿಖೆಯನ್ನು ನಡೆಸಿ ಸದರಿ ಅಧಿನಿಯಮ ಕಲಂ 12(3) ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಶಿಫಾರಸ್ಸು ಮಾಡಿರುವ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಕೆ. ಮುರಳೀಧರ, ತಹಶೀಲ್ದಾರ್, ಉಡುಪಿ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕರ್ನಾಟಕ ಲೋಕಾಯುಕ್ತ ಅಧಿನಿಯಮ 12(3) ರನ್ವಯ ಶಿಫಾರಸು ಮಾಡಿರುವಂತೆ 1957 ರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14 (ಎ) ರನ್ವಯ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (2) ದಿನಾಂಕ: 26–12–2008 ರಲ್ಲಿ ಇಲಾಖಾ ವಿಚಾರಣೆ ಜರುಗಿಸಿ ಸರ್ಕಾರಕ್ಕೆ ವರದಿ ನೀಡಲು ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ದಿನಾಂಕ: 9–11–2009 ರಲ್ಲಿ ಶ್ರೀ ಕೆ. ಮುರಳೀಧರ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಚೇರಿ, ಉಡುಪಿ ಜಿಲ್ಲೆ ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ವಂಡಾರು ಗ್ರಾಮದ ದಿವಂಗತ ಶ್ರೀ ವಿ.ಕೆ. ಲಕ್ಷ್ಮೀನಾರಾಯಣ ಅಡಿಗ ರವರ ಮಗ ವಿ.ವಾಸುದೇವ ಅಡಿಗರವರು ವಂಡಾರು ಗ್ರಾಮದ ಸರ್ವೆ ನಂ. 30/7ಎ1 ಮತ್ತು ಇತರೆ ಜಮೀನುಗಳ ಪಹಣಿಯ ಕಾಲಂ 11 ರಲ್ಲಿನ ದಾಖಲೆಯನ್ನು ಪೂರ್ವಸ್ಥಿತಿಗೆ ತರಲು ತಾವು ಮಾಡಿದ ಆದೇಶದ ವಿರುದ್ಧ ಈ ಹಿಂದೆ ಸರ್ಕಾರಕ್ಕೆ ಸಲ್ಲಿಸಿದ್ದ ದೂರು ಅರ್ಜಿಯ ಕುರಿತು ಮಾನ್ಯ ಉಡುಪಿ ಜಿಲ್ಲಾಧಿಕಾರಿಯವರು ಎರಡು ಬಾರಿ ಕುಂದಾಪುರ ಸಹಾಯಕ ಕಮೀಶನರ್ ಮೂಲಕ ವಿಚಾರಣೆ ನಡೆಸಿ ದಿನಾಂಕ: 6–12–2005 ಹಾಗೂ ದಿನಾಂಕ: 23–2–2007 ರಲ್ಲಿ ಇಂತಹ ಪ್ರಕರಣದ ಪುನರಾವರ್ತನೆಯಾಗದಂತೆ ಎಚ್ಚರಿಕೆ ನೀಡಿ ದಿನಾಂಕ: 1–4–2008 ರಂದು ಸರ್ಕಾರಕ್ಕೆ ವರದಿ ಸಲ್ಲಿಸಿ ಪ್ರಕರಣವನ್ನು ಮುಕ್ತಾಯಗೊಳಿಸಿರುತ್ತಾರೆ. ಹಾಗೂ ಅರ್ಜಿದಾರರಾದ ಶ್ರೀ ವಿ. ವಾಸುದೇವ ಅಡಿಗ ರವರು ದಿನಾಂಕ: 28–10–2005 ಹಾಗೂ ಈ ಇದೇ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀ ಎ. ಗೋಪಾಲ ಪೂಜಾರಿ ಇವರು ಈ ಹಿಂದೆ ದಿನಾಂಕ: 7–7–2005 ರಲ್ಲಿ ಗೌರವಾನ್ವಿತ ಕರ್ನಾಟಕ ಲೋಕಾಯುಕ್ತರ ಸಮಕ್ಷಮದಲ್ಲಿ ದೂರು ಅರ್ಜಿಗಳನ್ನು ಸಲ್ಲಿಸಿ, ಸದರಿ ದೂರು ಅರ್ಜಿಯನ್ನು ಮಾನ್ಯ ಉಪ ಲೋಕಾಯುಕ್ತರು ವಿಚಾರಣೆ ನಡೆಸಿ ದಿನಾಂಕ: 3–3–2006 ರಲ್ಲಿ ಪ್ರತಿವಾದಿಯಾದ ಶ್ರೀ ಕೆ. ಮುರಳೀಧರ, ತಹಶೀಲ್ದಾರ್ ಇವರಿಂದ ವಿವರಣೆಯನ್ನು ಪಡೆದು ಅದನ್ನು ಮಾನ್ಯ ಮಾಡಿ, ಸಂಖ್ಯೆ: UPLOK/MYS/264/2005/PP ದಿನಾಂಕ: 3–3–2006 ರಲ್ಲಿ ಸಾರ್ವಜನಿಕ ಅಭಿಯೋಜಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಅರ್ಜಿದಾರರಾದ ಶ್ರೀ ಅಂಬಲವಾಡಿ ಗೋಪಾಲ ಪೂಜಾರಿ ರವರ ದೂರು ಅರ್ಜಿಯನ್ನು ಪರಿಶೀಲಿಸಿ ಗೌರವಾನ್ವಿತ ಲೋಕಾಯುಕ್ತರು, ಉಪ ಲೋಕಾಯುಕ್ತರು ಆದೇಶದನ್ವಯ ದೂರನ್ನು ಮುಕ್ತಾಯಗೊಳಿಸಲಾಗಿದೆ ಎಂದು ಹಿಂಬರಹವನ್ನು ನೀಡಿರುತ್ತಾರೆ. ಆದ್ದರಿಂದ, ಈಗ ಪುನ: ಇದೇ ವಿಷಯಕ್ಕೆ ಸಂಬಂಧಿಸಿದಂತೆ, ಸರ್ಕಾರದಿಂದ ಇಲಾಖಾ ವಿಚಾರಣೆ ನಡೆಸಲು ಸರ್ಕಾರದ ಆದೇಶ ಸಂಖ್ಯೆ: ಕಂಇ 56 ಎಡಿಇ 2008 ದಿನಾಂಕ: 26–12–2008 ರಲ್ಲಿ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿದ್ದನ್ನು ಪುನರ್ ಪರಿಶೀಲಿಸಿ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಕೋರಿರುತ್ತಾರೆ. ಸರ್ಕಾರವು ಶ್ರೀ ಕೆ. ಮುರಳೀಧರ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಇವರು ಸಲ್ಲಿಸಿದ್ದ ದಿನಾಂಕ: 9–11–2009 ಮನವಿಯನ್ನು ಪರಿಶೀಲಿಸಿ ಈಗಾಗಲೇ ಮಾನ್ಯ ಉಪ ಲೋಕಾಯುಕ್ತರು ವಂಡಾರು ಗ್ರಾಮದ ಸರ್ವೆ ನಂ. 30/7 ಮತ್ತು ಇತರೆ ಜಮೀನುಗಳ ಪಹಣಿಯ ಕಾಲಂ 11 ರಲ್ಲಿನ ದಾಖಲೆಯ ತಿದ್ದುಪಡಿ ಕುರಿತಂತೆ ವಿಚಾರಣೆಯನ್ನು ನಡೆಸಿ ದಿನಾಂಕ: 3–3–2006ರ ಹಿಂಬರಹದಲ್ಲಿ ಮುಕ್ತಾಯಗೊಳಿಸಲು ಆದೇಶಿಸಿರುವುದರಿಂದ, ಪುನ: ಇದೇ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಉಪಲೋಕಾಯುಕ್ತರಿಗೆ ದಿನಾಂಕ: 26–12–2008 ರ ಆದೇಶದಲ್ಲಿ ಇಲಾಖಾ ವಿಚಾರಣೆ ನಡೆಸಲು ವಹಿಸಿದ್ದನ್ನು ವಾಪಸ್ಸು ಪಡೆಯಲು ಸರ್ಕಾರವು ನಿರ್ಧರಿಸಿರುವುದರಿಂದ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 56 ಎಡಿಇ 2008, ಬೆಂಗಳೂರು, ದಿನಾಂಕ: 23–12–2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಪ್ರಕರಣದ ಇಲಾಖಾ ವಿಚಾರಣೆ ನಡೆಸಲು ದಿನಾಂಕ: 26–12–2008 ರಲ್ಲಿ ಮಾನ್ಯ ಉಪಲೋಕಾಯುಕ್ತರಿಗೆ ವಹಿಸಿರುವುದನ್ನು ಪುನ: ಇಲಾಖಾ ವಿಚಾರಣೆ ನಡೆಸುವ ಅವಶ್ಯಕತೆ ಇಲ್ಲವೆಂದು ಸರ್ಕಾರವು ಮನಗಂಡು ಈ ಹಿಂದೆ ದಿನಾಂಕ: 26–12–2008 ರಲ್ಲಿ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿದ್ದ ಆದೇಶವನ್ನು ಈ ಮೂಲಕ ಹಿಂಪಡೆದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಬಿ.ಸಸಾಲಟ್ಟಿ)**

ಪಿ.ಆರ್.101

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಸೇವೆಗಳು–3)

## ಒಳಾಡಳಿತ ಸಚಿವಾಲಯ

**ವಿಷಯ :** **2009–10 ನೇ ಸಾಲಿನ ಪೋಲೀಸ್ ಆಧುನೀಕರಣ ಕ್ರಿಯಾ ಯೋಜನೆಯಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ**

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: VI-21011/10/2009-PM-I ದಿನಾಂಕ:20/10/2009
2. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 01 ಪಿಎಫ್‌ಎಸ್ 2009 ದಿನಾಂಕ:10/11/2009.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : VI-21011/10/2009-PM-I ದಿನಾಂಕ 23/11/2009.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ:1/ಎಡಿಜಿಪಿ/ಟಿಟಿಎಂ/ಎಂಡಿಎನ್/2009–10 ದಿನಾಂಕ:24/11/2009.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಪತ್ರದಲ್ಲಿ ಕೇಂದ್ರ ಸರ್ಕಾರವು ಪೋಲೀಸ್ ಆಧುನೀಕರಣ ಕ್ರಿಯಾ ಯೋಜನೆಯಡಿ 2 ನೇ ಕಂತಿನ ಅನುದಾನ ರೂ,2666.50/– ಗಳನ್ನು ಮಂಜೂರು ಮಾಡಿದೆ.

ಮೇಲೆ ಓದಲಾದ (2) ರ ಹೆಚ್‌ಡಿ 01 ಪಿಎಫ್ಎಸ್ 2009 ದಿನಾಂಕ: 10/11/2009 ರ ಸರ್ಕಾರದ ಆದೇಶದಲ್ಲಿ ಪೋಲೀಸ್ ಆಧುನೀಕರಣ ಕ್ರಿಯಾ ಯೋಜನೆಯಡಿ ಕೇಂದ್ರ ಸರ್ಕಾರವು ದಿನಾಂಕ: 20/10/2009 ರಂದು ಮಂಜೂರು ಮಾಡಿರುವ 2ನೇ ಕಂತಿನ ಅನುದಾನ ರೂ.2666.50/– ಗಳನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ (3) ರ ಪತ್ರದಲ್ಲಿ ಕೇಂದ್ರ ಸರ್ಕಾರವು ಪೋಲೀಸ್ ಆಧುನೀಕರಣ ಕ್ರಿಯಾ ಯೋಜನೆಯಡಿ 3ನೇ ಕಂತಿನ ಅನುದಾನ ರೂ.15,34,00,000=00 ಗಳನ್ನು ಮಂಜೂರು ಮಾಡಿದೆ.

ಮೇಲೆ ಓದಲಾದ (4) ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಪೋಲೀಸ್ ಆಧುನೀಕರಣ 2009–10ನೇ ಸಾಲಿಗೆ ಕರ್ನಾಟಕ ರಾಜ್ಯದ ಪೋಲೀಸ್ ಇಲಾಖೆಗೆ 3ನೇ ಕಂತಿನ ರೂಪದಲ್ಲಿ ರೂ,15,34,00,000=00 ಗಳನ್ನು ಅನುದಾನ ಬಿಡುಗಡೆ ಮಾಡಲಾಗಿದ್ದು, ಸದರಿ ಅನುದಾನವನ್ನು 2009–10 ನೇ ಸಾಲಿನ ಕೇಂದ್ರ ಸರ್ಕಾದಿಂದ ಅನುಮೋದಿತ ಕ್ರಿಯಾ ಯೋಜನೆಯನ್ವಯ ವಿವಿಧ ಕಾರ್ಯ ಚಟುವಟಿಕೆಗಳಿಗಾಗಿ ಉಪಯೋಗಿಸಲು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್ ಡಿ 01 ಪಿಎಫ್ಎಸ್ 2009, ಬೆಂಗಳೂರು ದಿನಾಂಕ:30/12/2009**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೇಂದ್ರ ಸರ್ಕಾರವು ಪೋಲೀಸ್ ಆಧುನೀಕರಣ ಯೋಜನೆಯಡಿ 2009–10ನೇ ಸಾಲಿಗೆ ಮಂಜೂರು ಮಾಡಿರುವ 3ನೇ ಕಂತಿನ ಅನುದಾನ ರೂ.15,34,00,000/– [ಹದಿನೈದು ಕೋಟಿ ಮೂವತ್ನಾಲ್ಕು ಲಕ್ಷ ರೂಪಾಯಿಗಳು ಮಾತ್ರ] ಕೇಂದ್ರ ಸರ್ಕಾರದಿಂದ ಅನುಮೋದನೆಗೊಂಡ ಕ್ರಿಯಾ ಯೋಜನೆಗಳಿಗೆ ಉಪಯೋಗಿಸಿಕೊಳ್ಳಲು ಬಿಡುಗಡೆ ಮಾಡಿದೆ.

ಈ ಅನುದಾನವನ್ನು ಡಿ.ಸಿ. ಬಿಲ್ಲಿನ ಮುಖಾಂತರ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 622ವೆಚ್ಚ–11/09ದಿನಾಂಕ:23/12/2009ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**[ಬಿ.ಎಂ.ಲಕ್ಷ್ಮೀನಾರಾಯಣ]**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೋಲೀಸ್ ವೆಚ್ಚ)

ಪಿ.ಆರ್.102

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಕೆ.ಸೊಲಭೇಶ್ವರಪ್ಪ, ಡಿವೈ.ಎಸ್.ಪಿ ದಾವಣಗೆರೆ ಉಪ ವಿಭಾಗ, ಹಾಲಿ ಎ.ಸಿ.ಪಿ, ಸಂಚಾರ ಈಶಾನ್ಯ ವಲಯ, ಬೆಂಗಳೂರು ನಗರ ಮತ್ತು ಶ್ರೀ ಆರ್.ಚಂದ್ರಪ್ಪ, ಪಿ.ಎಸ್.ಐ, ಕುಮಾರಸ್ವಾಮಿ ಲೇಔಟ್ ಪೋಲೀಸ್ ಠಾಣೆ, ಬೆಂಗಳೂರು ನಗರ ಇವರುಗಳ ಜಂಟಿ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಒಇ 134 ಪೊಸಿಪ 2008 ದಿನಾಂಕ 23–07–2008.
**2)** ಹೆಚ್ಚುವರಿ ಪೋಲೀಸ್ ಅಧೀಕ್ಷಕರು, ಚಿತ್ರದುರ್ಗ ರವರ ಪತ್ರ ಸಂಖ್ಯೆ: ಹೆಪೊಅ/ಡಿ.ಇ/1/2008 ದಿನಾಂಕ 02–12–2008.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ. ಎಂ.ಕೆ.ಸೊಲಭೇಶ್ವರಪ್ಪ, ಡಿವೈ.ಎಸ್.ಪಿ. ದಾವಣಗೆರೆ ಉಪ ವಿಭಾಗ, ಹಿಂದಿನ ಪಿ.ಐ. ಕುಮಾರಸ್ವಾಮಿ ಲೇಔಟ್ ಪೋಲೀಸ್ ಠಾಣೆ, ಬೆಂಗಳೂರು ನಗರ ಮತ್ತು ಶ್ರೀ. ಚಂದ್ರಪ್ಪ, ಪಿಎಸ್ಐ, ಕುಮಾರ ಸ್ವಾಮಿ ಲೇಔಟ್ ಪೋಲೀಸ್ ಠಾಣೆ, ಬೆಂಗಳೂರು ನಗರ ಇವರ ವಿರುದ್ಧ ಪ್ರಕರಣವೊಂದರಲ್ಲಿ ನ್ಯಾಯಾಲಯವು ನೀಡಿರುವ ಇನ್‌ಜೆಂಕ್ಷನ್ ಆರ್ಡರ್ ಅನ್ನು ಠಾಣಾಧಿಕಾರಿಗಳಿಗೆ ನೀಡಿ, ದೂರು ನೀಡಿದ್ದರೂ ಅರ್ಜಿದಾರರಿಗೆ ಪೋಲೀಸ್ ರಕ್ಷಣೆ ನೀಡಿ, ಕಾನೂನಿನಂತೆ ಕ್ರಮ ಕೈಗೊಳ್ಳದೇ ವಿಫಲರಾಗಿರುವುದಾಗಿ ಉಪ ಲೋಕಾಯುಕ್ತರವರ ವರದಿಯನ್ವಯ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು, 1965 ರ ನಿಯಮ 6 ಮತ್ತು 8ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಸದರಿ ಇಲಾಖಾ ವಿಚಾರಣೆಯನ್ನು ನಡೆಸಲು ಅಡಿಷನಲ್ ಎಸ್.ಪಿ. ಚಿತ್ರದುರ್ಗ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಯವರು ನಿಯಮಾನುಸಾರ ವಿಚಾರಣೆ ನಡೆಸಿ ತಮ್ಮ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ವಿಚಾರಣೆ ಸಮಯದಲ್ಲಿ ಶಿಸ್ತಿನ ಪ್ರಾಧಿಕಾರದ ಪರವಾಗಿ 2 ಸಾಕ್ಷಿಗಳನ್ನು ಮತ್ತು 5 ದಾಖಲಾತಿಗಳನ್ನು, ರಕ್ಷಣಾ ಪರವಾಗಿ 6 ಸಾಕ್ಷಿಗಳನ್ನು ವಿಚಾರಣೆ ಮಾಡಿರುವುದು ಹಾಗೂ ರಕ್ಷಣಾ ಪರವಾಗಿ ದಾಖಲಾತಿಗಳನ್ನು ಪರಿಶೀಲಿಸಲಾಗಿರುತ್ತದೆ. ಆ.ಪೊ.ಅ–1 ರವರು ನ್ಯಾಯಾಲಯದ ತಡೆಯಾಜ್ಞೆಯನ್ನು ಪಾಲನೆ ಮಾಡುವಂತೆ ಅರ್ಜಿಯನ್ನು ಸ್ವೀಕರಿಸಿದ ನಂತರ ಅರ್ಜಿಯ ಕೆಳ ಭಾಗದಲ್ಲಿ ನ್ಯಾಯಾಲಯದ ಆದೇಶದ ಪ್ರಕಾರ ನಿಲ್ಲಿಸಲಾಗುವುದೆಂದು ಷರಾ ಬರೆದು ಸಹಿ ಮಾಡಿ ಸೀಲ್ ಹಾಕಿರುವುದು ಹಾಗೂ ಸ್ಥಳಕ್ಕೆ ಭೇಟಿ ನೀಡಿ ಎದುರು ಪಕ್ಷದವರಿಗೆ ನ್ಯಾಯಾಲಯದ ತಡೆಯಾಜ್ಞೆ ಇದೆ ಕಟ್ಟಡ ಕಟ್ಟಬೇಡಿ ಎಂದು ತಿಳಿಸಿ ನೋಟೀಸನ್ನು ಜಾರಿಗೊಳಿಸಿರುವುದು ದಾಖಲೆಗಳಿಂದ ಕಂಡು ಬಂದಿದ್ದು, ಆ.ಪೊ.ಅ–1 ರವರು ನ್ಯಾಯಾಲಯದ ಆದೇಶದಂತೆ ಅರ್ಜಿದಾರರ ಸ್ವತ್ತಿಗೆ ರಕ್ಷಣೆ ನೀಡಿರುತ್ತಾರೆಂಬ ಅಭಿಪ್ರಾಯಕ್ಕೆ ವಿಚಾರಣಾಧಿಕಾರಿಗಳು ಬಂದಿರುತ್ತಾರೆ. ಸಾಕ್ಷ್ಯಾಧಾರರ ವಿಚಾರಣೆಯಿಂದ ಹಾಗೂ ದಾಖಲಾತಿಗಳಿಂದ ಆ.ಪೊ.ಅ–1 ಶ್ರೀ.ಎಂ.ಕೆ.ಸೊಲಭೇಶ್ವರಪ್ಪ, ಡಿವೈ.ಎಸ್.ಪಿ. ಹಿಂದಿನ ಪಿ.ಐ.ಕುಮಾರಸ್ವಾಮಿ ಲೇಔಟ್ ಪೋಲೀಸ್ ಠಾಣೆ, ಬೆಂಗಳೂರು ನಗರ ಇವರ ವಿರುದ್ಧದ ಆರೋಪವು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಮುಂದುವರೆದು ಶ್ರೀ ಚಂದ್ರಪ್ಪ, ಪಿ.ಎಸ್.ಐ. ರವರು ಅರ್ಜಿದಾರರ ಕೋರಿಕೆಯಂತೆ ನ್ಯಾಯಾಲಯದ ಆದೇಶದಂತೆ ಕ್ರಮವಹಿಸದೆ ಶ್ರೀ ಕೆ.ಎಂ. ನಾರಾಯಣ ರೆಡ್ಡಿ, ಬೆಂಗಳೂರು ರವರಿಗೆ ಪರೋಕ್ಷವಾಗಿ ವಿವಾದಿತ ನಿವೇಶನದಲ್ಲಿ ಕಟ್ಟಡ ಕಟ್ಟಲು ಅವಕಾಶ ಮಾಡಿಕೊಡುವುದರ ಮೂಲಕ ನ್ಯಾಯಾಲಯದ ಆದೇಶ ಉಲ್ಲಂಘನೆ ಮಾಡಿರುವುದು ಹಾಗೂ ಸದರಿ ಅಧಿಕಾರಿಗಳ ಪರೋಕ್ಷ ಸಹಾಯದಿಂದ ಕಟ್ಟಡ ಕೆಲಸವನ್ನು ಮುಂದುವರೆಸಿ ಪೂರೈಸಿರುವುದು ಕಂಡು ಬಂದಿದ್ದು ಈ ಕಾರಣದಿಂದಾಗಿ ಆ.ಪೊ.ಅ–2 ರವರ ವಿರುದ್ಧದ ಆರೋಪವು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಕ್ಕೆ ಬಂದಿರುತ್ತಾರೆ. ಈ ಬಗ್ಗೆ ನಿಯಮಾನುಸಾರ 2ನೇ ಆರೋಪಿತ ಅಧಿಕಾರಿಗಳಾದ ಶ್ರೀ ಚಂದ್ರಪ್ಪ, ಪಿ.ಎಸ್.ಐ ರವರಿಗೆ ಎರಡನೇ ನೋಟೀಸನ್ನು ದಿನಾಂಕ 05–05–2009ರಂದು ಜಾರಿ ಮಾಡಿ ಅವರಿಂದ ಸಮಜಾಯಿಷಿಯನ್ನು ಪಡೆಯಲಾಗಿದೆ. ಸಮಜಾಯಿಷಿಯನ್ನು ಪರಿಶೀಲಿಸಲಾಗಿ ನ್ಯಾಯಾಲಯದ ತಡೆಯಾಜ್ಞೆಯನ್ನು ಗೌರವಿಸಿ ಕಟ್ಟಡದ ಕೆಲಸವನ್ನು ನಿಲ್ಲಿಸಲಾಗಿತ್ತು ಎಂಬುದು ಸಾಕ್ಷಿಗಳ ಹೇಳಿಕೆಯಿಂದ ಸ್ಪಷ್ಟವಾಗಿ ತಿಳಿದು ಬಂದಿದ್ದರೂ, ವಿಚಾರಣಾಧಿಕಾರಿಗಳು ತಮ್ಮ ಮೇಲೆ ದೋಷಾರೋಪಗಳು ಸಾಬೀತಾಗಿರುತ್ತದೆ ಎಂದು ವರದಿ ನೀಡಿರುತ್ತಾರೆ. ಇದು ಸಹಜ ತೀರ್ಮಾನವಲ್ಲ. ಅವರು ಫಿರ್ಯಾದಿ ಸಾಕ್ಷಿಗಳನ್ನು ಹೆಚ್ಚು ನಂಬಿರುತ್ತಾರೆ. ಎಂದು ತಿಳಿಸಿರುತ್ತಾರೆ. ತಾನು ಪೋಲೀಸ್ ಠಾಣೆಯ ಮುಖ್ಯಸ್ಥನಿರುವುದಿಲ್ಲ. ಯಾವುದೇ ತೀರ್ಮಾನ ತನ್ನ ಸ್ವಂತ ತೀರ್ಮಾನ ಆಗಿರುವುದಿಲ್ಲ. ಠಾಣಾ ಮುಖ್ಯಸ್ಥರ ಆದೇಶದಂತೆ ನಡೆದುಕೊಂಡು ಕಟ್ಟಡ ಸ್ಥಳದಲ್ಲಿ ಎರಡನೇ ಪಾಳಿಯಲ್ಲಿ ಕರ್ತವ್ಯಕ್ಕೆ ನೇಮಿಸಿ ಕ್ರಮಕೈಗೊಂಡಿರುವುದಾಗಿ ತಿಳಿಸಿ ತಮಗೆ ವಿಧಿಸಲು ಉದ್ದೇಶಿಸಿರುವ ಶಿಕ್ಷೆಯನ್ನು ಹಿಂತೆಗೆದುಕೊಳ್ಳಲು ಕೋರಿರುತ್ತಾರೆ.

ಇಲಾಖಾ ವಿಚಾರಣೆಯ ವರದಿಯಿಂದ ಕಂಡು ಬಂದಿರುವ ಅಂಶವೆಂದರೆ ನ್ಯಾಯಾಲಯದ ತಡೆಯಾಜ್ಞೆ ಇದ್ದರೂ, ಕಟ್ಟಡದ ನಿರ್ಮಾಣವನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿರುವುದಿಲ್ಲ ಮತ್ತು 4 ತಿಂಗಳ ಅವಧಿಯೊಳಗೆ ಕಟ್ಟಡ ನಿರ್ಮಾಣವಾಗಿದೆ. ದಿನಾಂಕ 12–8–2005ರಂದು ತಾತ್ಕಾಲಿಕ ತಡೆಯಾಜ್ಞೆಯಲ್ಲಿ ಠಾಣೆಯವರ ಗಮನಕ್ಕೆ ತರಲಾಗಿದೆ ಹಾಗೂ 29–09–2005ರಂದು ತಡೆಯಾಜ್ಞೆಯನ್ನು ತೆರವುಗೊಳಿಸಲಾಗಿದೆ. ದಿನಾಂಕ 01–06–2005ರಂದು ಕಟ್ಟಡ ನಿರ್ಮಾಣ ಕೆಲಸ ಪ್ರಾರಂಭ ಮಾಡಿದ್ದು ದಿನಾಂಕ 30–09–2005 ರಂದು ಕಟ್ಟಿ ಮುಗಿಸಿರುವುದು ಕಂಡು ಬಂದಿದ್ದು ಗಮನಿಸಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಕಾರಣ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 134 ಪೊಸಿಪ 2008, ಬೆಂಗಳೂರು, ದಿನಾಂಕ: 22–12–2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ. ಎಂ.ಕೆ. ಸೊಲಭೇಶ್ವರಪ್ಪ, ಡಿವೈ.ಎಸ್.ಪಿ. ಹಿಂದಿನ ಪಿ.ಐ. ಕುಮಾರಸ್ವಾಮಿ ಲೇಔಟ್ ಪೋಲೀಸ್ ಠಾಣೆ, ಬೆಂಗಳೂರು ನಗರ ಇವರ ವಿರುದ್ಧದ ಆರೋಪವು ಸಾಬೀತಾಗಿಲ್ಲದಿರುವುದರ ಹಿನ್ನೆಲೆಯಲ್ಲಿ ಅವರನ್ನು ಆಪಾದನೆಯಿಂದ ದೋಷಮುಕ್ತಗೊಳಿಸಲಾಗಿದೆ. ಶ್ರೀ. ಚಂದ್ರಪ್ಪ, ಪಿ.ಎಸ್.ಐ, ಕುಮಾರಸ್ವಾಮಿ ಲೇಔಟ್ ಪೋಲೀಸ್ ಠಾಣೆ, ಬೆಂಗಳೂರು ನಗರ ಇವರ ವಿರುದ್ಧದ ಆರೋಪವು ಸಾಬೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಪೋಲೀಸ್ ಕಾಯ್ದೆಯ ಕಲಂ 23(i)ಎ(ii) ರನ್ವಯ ಇವರ ವಾರ್ಷಿಕ ವೇತನ ಬಡ್ತಿಯನ್ನು ಮೂರು ವರ್ಷಗಳ ಅವಧಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ.ಎನ್.ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೋಲೀಸ್ ಸೇವೆಗಳು)

ಪಿ.ಆರ್.103

**ಆರ್ಥಿಕ ಸಚಿವಾಲಯ**

**ವಿಷಯ :** ಶ್ರೀ ಹೆಚ್.ಸಿ. ನಾಗರಾಜ್, ವಾ.ತೆ.ಸ.ಆ., ರವರ ವಿರುದ್ಧ ದಾಖಲಾದ 'ಅಕ್ರಮ ಆಸ್ತಿ ಹೊಂದಿರುವ' ಪ್ರಕರಣದ ಅಭಿಯೋಜನಾ ಆದೇಶದ ಮಂಜೂರಾತಿ ಕುರಿತು.

**ಓದಲಾಗಿದೆ :** .

1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಬಿಡಿ-20/ ಸಿಆರ್-07/2007/ಟಿಕೆಆರ್ ದಿನಾಂಕ 06-07-2009.
2. ತನಿಖಾಧಿಕಾರಿಯವರ ವರದಿ ಸಂಖ್ಯೆ: ಲೋಖ್/ಎಸ್.ಪಿ/ತುಮ/ಮೊ.ನಂ.07/2007 ದಿನಾಂಕ 03-07-2009.
3. ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು, ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.
4. ಸರ್ಕಾರಿ ಆದೇಶ ಸಂಖ್ಯೆ: ಆಇ38 ವಾತೆತ 2007 ದಿನಾಂಕ: 04-11-2009
5. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು,ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಬಿಡಿ-20/ಸಿಆರ್-07/2007/ಟಿಕೆಆರ್, ದಿನಾಂಕ 03-12-2009

**ಪ್ರಸ್ತಾವನೆ :**

ಶ್ರೀ ಹೆಚ್.ಸಿ. ನಾಗರಾಜ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ವಿರುದ್ಧ ಗುನ್ನೆ ಸಂಖ್ಯೆ:07/2007 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ತುಮಕೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು , (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ: 06-07-2009ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19 ರಡಿಯಲ್ಲಿ ಮಂಜೂರಾತಿಗಾಗಿ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1) ರ ಪತ್ರದಲ್ಲಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1) ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

I) ಪ್ರಥಮ ವರ್ತಮಾನ ವರದಿ ದಿನಾಂಕ:29-05-2007.

II) ಶೋಧನಾ ಪಂಚನಾಮೆ

(1) "ಚೆಲುವ ಕೃಪ" 2ನೇ ಕ್ರಾಸ್, ವಿದ್ಯಾನಗರ, ತುಮಕೂರು. ದಿನಾಂಕ: 30-05-2007.
(2) ಆರೋಪಿತ ಕಛೇರಿ, ದಿನಾಂಕ:30-05-2007
(3) ಯೂಕೋ ಬ್ಯಾಂಕ್ ಭದ್ರತಾ ಕೊಠಡಿ, ತುಮಕೂರು ದಿನಾಂಕ:04-07-2007.
(4) ತುಮಕೂರು ಸಿದ್ಧಗಂಗಾ ಬಡಾವಣೆ ಎಸ್.ಬಿ.ಎಂ. ಬ್ಯಾಂಕ್, ದಿನಾಂಕ:02-11-2008.

III) ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ: 03-07-2009.

IV) ತನಿಖೆಯ ಅಂತಿಮ ವರದಿಯ ಭಾಗಗಳಾದ ಈ ಕೆಳಕಂಡ ಕಡತಗಳು:-

**ಸಾಕ್ಷಿಗಳ ಹೇಳಿಕೆಗಳು:-**

**1)** ಶ್ರೀ ಎಂ.ಹಿರಿಯಣ್ಣ ಬಿನ್.ಲೇಟ್ ಅಣ್ಣಯ್ಯ ಶಾಸ್ತ್ರಿ, 48 ವರ್ಷ, ಬ್ರಾಹ್ಮಣರು, ಎಸ್.ಡಿ.ಎ., ಡಿ.ಡಿ.ಪಿ.ಐ. ಕಛೇರಿ, ತುಮಕೂರು ವಾಸ: ಚೆನ್ನಕೇಶವ ನಿಲಯ, 8ನೇ ಮುಖ್ಯರಸ್ತೆ, ಎಸ್.ಎಸ್.ಪುರಂ. ತುಮಕೂರು.

**2)** ಶ್ರೀ ಎಲ್.ಡಿ. ಮಂಜುನಾಥ್ ಬಿನ್.ಎಲ್.ಡಿ. ವೀರಭದ್ರಯ್ಯ, ಲಿಂಗಾಯಿತರು, ಎಫ್.ಡಿ.ಎ., ನಗರಸಭೆ, ತುಮಕೂರು ವಾಸ: ಲಿಂಗೇನಹಳ್ಳಿ, ವಿನಾಯಕನಗರ ಬಡಾವಣೆ, ಮಧುಗಿರಿ.

**3)** ಶ್ರೀಮತಿ ಎಲ್. ನಾಗರತ್ನಮ್ಮ ಕೋಂ. ಕೆ.ಜಿ. ಶ್ರೀನಿವಾಸಮೂರ್ತಿ, 55 ವರ್ಷ, ಪದ್ಮಸಾಲಿ ಜನಾಂಗ, ಎಸ್.ಡಿ.ಎ., ಸರ್ಕಾರಿ ಆಸ್ಪತ್ರೆ, ತುಮಕೂರು, ವಾಸ: ಶಾಂತ ನಗರ ಮುಖ್ಯರಸ್ತೆ, ತುಮಕೂರು.

**4)** ಶ್ರೀಮತಿ ಗಾಯಿತ್ರಿ ಕೋಂ. ಸಿದ್ಧರಾಮಚಂದ್ರ 32 ವರ್ಷ, ಸಹಾಯಕ ಅಂಕಿ ಅಂಶಗಳ ಅಧಿಕಾರಿ, ಡಿ.ಡಿ.ಪಿ.ಐ. ಕಛೇರಿ, ತುಮಕೂರು ವಾಸ:6ನೇ ಅಡ್ಡರಸ್ತೆ, ಶ್ರೀನಿಧಿ ನಿಲಯ, ಆದರ್ಶನಗರ, ತುಮಕೂರು.

**5)** ಶ್ರೀ ಕೆ.ಬಿ.ಶಂಕರ ಲಿಂಗಯ್ಯ ಬಿನ್.ಬೆಟ್ಟಯ್ಯ, 46 ವರ್ಷ ಒಕ್ಕಲಿಗರು, ಎಸ್.ಡಿ.ಎ., ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಗಾಂಧಿನಗರ, ತುಮಕೂರು.ವಾಸ: 10ನೇ ಬಿ.ಕ್ರಾಸ್ ಹೊಸ ಬಡಾವಣೆ, ದೇವರಾಯ ಪಟ್ಟಣ, ತುಮಕೂರು.

**6)** ಡಾ: ದಿವಾಕರ್, ಜಿಲ್ಲಾ ಆಸ್ಪತ್ರೆ, ತುಮಕೂರು, ವಾಸ: ನಾಗಶ್ರೀ ನಿಲಯ, 1ನೇ ಕ್ರಾಸ್, ಚಂದ್ರಮೌಳೇಶ್ವರ ಬಡಾವಣೆ, ಕ್ಯಾತಸಂದ್ರ.

ಆದಾಯ:–

ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಸಿ.ನಾಗರಾಜ್ ಮತ್ತು ಅವರ ಕುಟುಂಬದ ಸದಸ್ಯರು ಪಡೆದ ಆದಾಯದ ವಿವರ:–

| ಕ್ರ. ಸಂ. | ವಿವರಗಳು | ಮೊತ್ತ ರೂ.ಗಳಲ್ಲಿ | ಕಡತ ಸಂಖ್ಯೆ | ಪುಟ ಸಂಖ್ಯೆ |
|---|---|---|---|---|
| 1) | ಶ್ರೀ ಹೆಚ್.ಸಿ.ನಾಗರಾಜ್‌ರವರ ವೇತನ ಆದಾಯ | 16,61,215–00 | 40 | 5 |
| 2) | ಮನೆ ಖರೀದಿಸಲು ಶ್ಯಾಮರಾವ್ ವಿಠ್ಠಲ್ ಕೋ–ಆಪರೇಟೀವ್ ಬ್ಯಾಂಕ್ ಇಲ್ಲಿಂದ ಪಡೆದಿರುವ ಸಾಲ | 8,06,932–00 | 2 | 26 |
| 3) | ಆರೋಪಿತರ ಪತ್ನಿ ಶ್ರೀಮತಿ ಟಿ.ಆರ್.ಕೋಕಿಲರವರು ಎಸ್.ಬಿ.ಐ.ವಿನೋಬಾ ನಗರ ಶಿವಮೊಗ್ಗ. ಪಡೆದಿರುವ ಸಾಲ ಮರುಪಾವತಿ | 2,56,000–00 | 18 | 6 |
| 4) | ವಿಜಯ ಬ್ಯಾಂಕ್, ಮಧುಗಿರಿ ಇವರಿಂದ ಪಡೆದಿರುವ ಸಾಲದ ಬಾಬ್ತು ಅಸಲು ಮತ್ತು ಬಡ್ಡಿ ಪಾವತಿ | 2,74,000–00 | 20 | 2 |
| 5) | ಬ್ಯಾಂಕ್ ಠೇವಣಿ, ಎನ್.ಎಸ್.ಸಿ. ಇಂದಿರಾವಿಕಾಸ ಪತ್ರ ಇತರೇ ಹಣಕಾಸು ಸಂಸ್ಥೆಗಳ ನಿಶ್ಚಿತ ಠೇವಣಿಗಳಿಂದ ಮತ್ತು ಅಂಚೆ ಕಛೇರಿಗಳಿಂದ ಬಡ್ಡಿ | 19,200–49 | 21<br>22<br>2,6<br>16<br>17<br>18<br>20 | 3<br>2<br>57,58<br>12,13,14<br>24,25<br>35–38<br>4–5 |
| 6) | ಶ್ರೀಮತಿ ಟಿ.ಆರ್.ಕೋಕಿಲ | 5,301–28 | 21<br>16<br>18<br>18<br>19 | 5<br>8,9,10<br>12 ರಿಂದ<br>21<br>22,23<br>1ರಿಂದ3 |
| 7) | ಶ್ರೀಮತಿ ಬಿಂದುಶ್ರೀ | 2,905–92 | 21<br>21<br>17 | 6<br>7<br>20 |
| 8) | ಶ್ರೀಮತಿ ಹೆಚ್.ಸಿ.ಸರೋಜಮ್ಮ | 11,985–55 | 21<br>26<br>17<br>17 | 8<br>71,72<br>7ರಿಂದ19<br>2ರಿಂದ6 |
| 9) | ಶಿಲ್ಪಶ್ರೀ | 1,643–00 | 21 | 9 |
| 10) | ಮಾಧವಿ | 878–00 | 21<br>26 | 10<br>17 |

| | | | | |
|---|---|---|---|---|
| 12) | ಎನ್.ಶಮಂತ್ | 3,412–00 | 21<br>16 | 11<br>5,6 |
| 13) | ರವಿರಾಜ್ | 1064–00 | 21 | 12,13 |
| 14) | ಟಿ.ಆರ್. ಶಶಿಕಲಾ | 4,376–00 | 21 | 7 |
| 15) | ದಾನಮ್ಮ | 88–00 | 26 | 69 |
| 16) | ರೋಹಿತ್ | 7,014–98 | 18 | 33,34 |

ಮೇಲ್ಕಂಡ ಹೆಸರುಗಳಲ್ಲಿ ವಿವಿಧ ಬ್ಯಾಂಕುಗಳಲ್ಲಿ ಹೊಂದಿದ್ದ ಉಳಿತಾಯ ಖಾತೆಗಳಿಗೆ ಬ್ಯಾಂಕಿನವರು ನೀಡಿರುವ ಒಟ್ಟು ಬಡ್ಡಿ ಹಣ ರೂ.57,869–22.

ಆರೋಪಿತರು ತಮ್ಮ ಹೆಸರಿನಲ್ಲಿ ಮತ್ತು ತಮ್ಮ ಮಗ ಎನ್.ಶಮಂತ್, ಪತ್ನಿ ಟಿ.ಆರ್.ಕೋಕಿಲಾ ಹಾಗೂ ನಾದಿನಿ ಶೋಭಾರಾಣಿ ಯವರ ಹೆಸರಿನಲ್ಲಿ ತೊಡಗಿಸಿರುವ ಹಣ ಷೇರುಗಳಲ್ಲಿ ತೊಡಗಿಸಿರುವ ಹಣ:

| ಕ್ರ ಸಂ. | ಹೆಸರು | ಮೊತ್ತ ರೂ.ಗಳಲ್ಲಿ | ಕಡತ ಸಂಖ್ಯೆ | ಪುಟ ಸಂಖ್ಯೆ |
|---|---|---|---|---|
| 1) | ಶ್ರೀಮತಿ ಕೋಕಿಲಾ | 03,95,181–61 | 32 | 11 |
| 2) | ಶಮಂತ್ | 1,11,212–83 | 32 | 3 |
| 3) | ಶ್ರೀಮತಿ ಶೋಭಾ ರಾಣಿ | 1,01,602–91 | 32 | 5 |
| | ಒಟ್ಟು ಮೊತ್ತ | 06,07,997–35 | 32 | 3,5,11 |

ಕುಟುಂಬದ ಸದಸ್ಯರ ಇತರೇ ಆದಾಯದ ವಿವರಗಳು:–

| ಕ್ರ. ಸಂ. | ವಿವರ | ಮೊತ್ತ ರೂ.ಗಳಲ್ಲಿ | ಕಡತ ಸಂಖ್ಯೆ | ಪುಟ ಸಂಖ್ಯೆ |
|---|---|---|---|---|
| 1) | ಶ್ರೀಮತಿ ಟಿ.ಆರ್. ಕೋಕಿಲಾ ರವರಿಗೆ ಮನೆ ಬಾಡಿಗೆ, ವ್ಯಾಪಾರ ವಹಿವಾಟು ಹಾಗೂ ಇತರೇ ಮೂಲಗಳಿಂದ ಬಂದ ಒಟ್ಟು ಆದಾಯ | 2,19,656–00 | 41 | 23,24,25 |
| 2) | ಎನ್. ಶಮಂತ್ ಭಾರತೀಯ ಜೀವ ವಿಮಾ ನಿಗಮದಿಂದ ಬಂದ ಕಮಿಷನ್ ಹಣ | 1,90,420–00 | 41 | 10ರಿಂದ 15 |

ಆರೋಪಿತರು ಪರಿಶೀಲನಾ ಅವಧಿಯಲ್ಲಿ ಗಳಿಸಿದ ಒಟ್ಟು ಆದಾಯದ ಮೊತ್ತ ರೂ.40,74,090–00

ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಸಿ.ನಾಗರಾಜ್ ಮತ್ತು ಅವರ ಕುಟುಂಬದ ಸದಸ್ಯರ ಹೆಸರಿನಲ್ಲಿರುವ ಆಸ್ತಿಗಳ ಪಟ್ಟಿ:–

| ಕ್ರ. ಸಂ. | ವಿವರ | ಮೊತ್ತ ರೂ,ಗಳಲ್ಲಿ | ಕಡತ ಸಂಖ್ಯೆ | ಪುಟ ಸಂಖ್ಯೆ |
|---|---|---|---|---|
| 1 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮಹಾಲಕ್ಷ್ಮಿಪುರಂ ವಲಯ, ಸಂಖ್ಯೆ:12, ಎಸ್.ಎಫ್.ಹೆಚ್.ಎಸ್ ಮನೆ ಸಂಖ್ಯೆ: ಎಂ.ಎಫ್ 53/2 ನಂದಿನಿ ಬಡಾವಣೆ ಬೆಂಗಳೂರು (ಶ್ರೀ ಹೆಚ್.ಸಿ. ನಾಗರಾಜ್‌ರವರ ಹೆಸರಿನಲ್ಲಿ) | 12,73,000–00 | 1 | 3 |
| 1ಎ | ಮೇಲ್ಕಂಡ ಮನೆಯ ಮರು ನಿರ್ಮಾಣ ವೆಚ್ಚ | 6,04,000–00 | ಟಿ.ಎ.ಸಿ. ವರದಿ ಪ್ರಕಾರ | ಟಿ.ಎ.ಸಿ. ವರದಿ ಪ್ರಕಾರ |

| | | | | |
|---|---|---|---|---|
| 2 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮಹಾಲಕ್ಷ್ಮಿಪುರಂ ವಲಯ, ಸಂಖ್ಯೆ:12, ಎಸ್.ಎಫ್.ಹೆಚ್.ಎಸ್ ಮನೆ ಸಂಖ್ಯೆ: ಎಂ.ಎಫ್ 53/6 ನಂದಿನಿ ಬಡಾವಣೆ ಬೆಂಗಳೂರು (ಶ್ರೀ ಹೆಚ್.ಸಿ. ನಾಗರಾಜ್ ರವರ ಮಗ ಎನ್. ಶಮಂತ್‌ರವರ ಹೆಸರಿನಲ್ಲಿ) | 12,73,000–00 | 2 | 4 |
| 2ಎ | ಮೇಲ್ಕಂಡ ಮನೆ ಮರು ನಿರ್ಮಾಣ ವೆಚ್ಚ | 6,04,000–00 | ಟಿ.ಎ.ಸಿ. ವರದಿ ಪ್ರಕಾರ | ಟಿ.ಎ.ಸಿ. ವರದಿ ಪ್ರಕಾರ |
| 3 | ಮನೆ ನಂ.168/10, ಕೆ.ಹೆಚ್.ಬಿ. ಕಾಲೋನಿ, ಶಿವಮೊಗ್ಗ. (ಶ್ರೀ ಹೆಚ್.ಸಿ.ನಾಗರಾಜ್ ರವರಪತ್ನಿ ಶ್ರೀಮತಿ ಕೋಕಿಲಾರವರ ಹೆಸರಿನಲ್ಲಿ) | 61,546–00 | 3 | 3 |
| 3ಎ | ಮೇಲ್ಕಂಡ ಮನೆಯ ಮರು ನಿರ್ಮಾಣ ವೆಚ್ಚ | 10,00,000–00 | ಟಿ.ಎ.ಸಿ. ವರದಿ ಪ್ರಕಾರ | ಟಿ.ಎ.ಸಿ. ವರದಿ ಪ್ರಕಾರ |
| 4 | ಮನೆ ನಂ.5, ಎಂ.ಐ.ಜಿ. 3ನೇ ಹಂತ, ಮೈಸೂರು. (ಶ್ರೀ ಹೆಚ್.ಸಿ. ನಾಗರಾಜ್ ರವರ ಪತ್ನಿ ಶ್ರೀಮತಿ ಕೋಕಿಲಾರವರ ಹೆಸರಿನಲ್ಲಿ) | 1,68,550–00 | 4 | 11 |
| 4ಎ | ಮನೆಯ ಸುಣ್ಣ ಬಣ್ಣಕ್ಕಾಗಿ ಖರ್ಚು ಮಾಡಿರುವ ವಿವರ | 15,000–00 | ಟಿ.ಎ.ಸಿ. ವರದಿ ಪ್ರಕಾರ | ಟಿ.ಎ.ಸಿ. ವರದಿ ಪ್ರಕಾರ |
| 5 | ನಿವೇಶನ ವಿಸ್ತೀರ್ಣ 40'x 50' ಸಂಖ್ಯೆ: , 2ನೇ ಕ್ರಾಸ್, ಚೆಲುವ ಕೃಪ, ವಿದ್ಯಾನಗರ, ತುಮಕೂರು | 1,06,000–00 | 5 | 35 |
| 5ಎ | ಮೇಲ್ಕಂಡ ನಿವೇಶನದಲ್ಲಿ ಮನೆ ನಿರ್ಮಾಣ ವೆಚ್ಚ | 16,20,000–00 | ಟಿ.ಎ.ಸಿ. ವರದಿ ಪ್ರಕಾರ | ಟಿ.ಎ.ಸಿ. ವರದಿ ಪ್ರಕಾರ |
| 6 | ನಿವೇಶನ ಸಂಖ್ಯೆ:896, ಚಿತ್ರಭಾನು ರಸ್ತೆ, ಟಿ.ಟಿ.ಕೆ. ಲೇಔಟ್, ಮೈಸೂರು (ಶ್ರೀ ಹೆಚ್.ಸಿ. ನಾಗರಾಜ್ ರವರ ಭಾವ ಶ್ರೀ ರಾಮಚಂದ್ರರವರ ಹೆಸರಿನಲ್ಲಿ) | 7,20,000–00 | 6 | 58 |
| 6ಎ | ಮೇಲ್ಕಂಡ ನಿವೇಶನದಲ್ಲಿ ಮನೆ ನಿರ್ಮಾಣ ವೆಚ್ಚ | 26,00,000–00 | ಟಿ.ಎ.ಸಿ. ವರದಿ ಪ್ರಕಾರ | ಟಿ.ಎ.ಸಿ. ವರದಿ ಪ್ರಕಾರ |
| 7 | 40'x50' ಅಡಿ ಅಳತೆಯ ನಿವೇಶನ ಸಂಖ್ಯೆ:38 ಸರ್.ಎಂ.ವಿಶ್ವೇಶ್ವರ ಬಡಾವಣೆ, 4ನೇ ಬ್ಲಾಕ್ ಬೆಂಗಳೂರು | 3,44,773–00 | 7 | 7 |
| 8 | ನಿವೇಶನ ಸಂಖ್ಯೆ: ಓ1, ವಿದ್ಯಾನಗರ ಬಡಾವಣೆ, ತುಮಕೂರು (ಶ್ರೀ ಹೆಚ್.ಸಿ. ನಾಗರಾಜ್ ರವರ ಮಗ ಎನ್.ಶಮಂತ್‌ರವರ ಹೆಸರಿನಲ್ಲಿ) | 4,89,849–00 | 8 | 1 |
| 9 | ನಿವೇಶನ ಸಂಖ್ಯೆ: ಎಂ.ಐ.ಜಿ. 398/ಎ, ಕಲ್ಲಹಳ್ಳಿ 2ನೇ ಹಂತ ಬಡಾವಣೆ, ಶಿವಮೊಗ್ಗ. (ಶ್ರೀ ಹೆಚ್.ಸಿ. ನಾಗರಾಜ್ ರವರ ಮಗ ಎನ್. ಶಮಂತ್‌ರವರ ಹೆಸರಿನಲ್ಲಿ) | 86,000–00 | 9 | 2 |

| | | | | |
|---|---|---|---|---|
| 10 | '40 x60' ಅಡಿ ಅಳತೆಯ ನಿವೇಶನ ಸಂಖ್ಯೆ: 3969, ದಟ್ಟಗಳ್ಳಿ ಬಡಾವಣೆ, ಮೈಸೂರು. | 50,000-00 | 10 | 6 |
| 11 | '30 x 40'ಅಡಿ ಅಳತೆಯ ಎರಡು ನಿವೇಶನಗಳು (ಶ್ರೀ ಹೆಚ್.ಸಿ. ನಾಗರಾಜ್‌ರವರ ಪತ್ನಿ ಶ್ರೀಮತಿ ಕೋಕಿಲಾ ಮತ್ತು ನಾದಿನಿ ಶ್ರೀಮತಿ ಶೋಭಾರಾಣಿರವರ ಹೆಸರಿನಲ್ಲಿ) ಊರುಕೆರೆ ಗ್ರಾಮ ಪಂಚಾಯತ್ ಸರಹದ್ದಿನಲ್ಲಿ | 48,000-00 | 11 | 2 |
| 12 | ಶ್ರೀ ಹೆಚ್.ಸಿ. ನಾಗರಾಜ್‌ರವರ ಮಗ ಎನ್.ಶಮಂತ್‌ರವರ ಹೆಸರಿನಲ್ಲಿ ತುಮಕೂರಿನ ಅಂತರಸನಹಳ್ಳಿ, ಕೈಗಾರಿಕಾ ವಸಾಹತುವಿನಲ್ಲಿ 2ಪಿ ಕೈಗಾರಿಕಾ ನಿವೇಶನವನ್ನು ಮಂಜೂರು ಮಾಡಲು ಕೋರಿ ಅರ್ಜಿ ಸಲ್ಲಿಸಿದ್ದು, ಸದರಿಯವರಿಗೆ ಕೈಗಾರಿಕಾ ನಿವೇಶನ ಮಂಜೂರಾಗದೇ ಆರೋಪಿತರು ಮಂಜೂರಾತಿಗಾಗಿ ಮುಂಗಡವಾಗಿ ಕಟ್ಟಿದ್ದ ರೂ.47,800/- ಗಳನ್ನು ವಾಪಸ್ಸು ಪಡೆದಿರುವುದಿಲ್ಲ. | 47,800-00 | 13 | 3 |
| | ಒಟ್ಟು ಮೊತ್ತ | 1,11,11,518-00 | | |

ಆರೋಪಿತರು ಪರಿಶೀಲನಾ ಅವಧಿಯಲ್ಲಿ ಗಳಿಸಿರುವ ಸ್ಥಿರಾಸ್ತಿಯ ಮೊತ್ತ ರೂ.**1,11,11,518-00**

**ಖರ್ಚುಗಳು :**

| ಕ್ರ. ಸಂ. | ವಿವರ | ಮೊತ್ತ ರೂ.ಗಳಲ್ಲಿ | ಕಡತ ಸಂಖ್ಯೆ | ಪುಟ ಸಂಖ್ಯೆ |
|---|---|---|---|---|
| **1** | ಶ್ರೀ ಹೆಚ್.ಸಿ. ನಾಗರಾಜ್‌ರವರ ಕೌಟುಂಬಿಕ ಆಹಾರ ಪದಾರ್ಥಗಳ ಖರ್ಚು | 6,53,765-00 | 37 | 10 |
| **2** | ಆರೋಪಿತ ಅಧಿಕಾರಿ, ಶ್ರೀ ಹೆಚ್,ಸಿ. ನಾಗರಾಜು ಹಾಗೂ ಅವರ ಪತ್ನಿಯ ಹೆಸರಿನಲ್ಲಿ ಜಂಟಿಯಾಗಿ ಬೆಂಗಳೂರಿನ ಎಸ್.ಎಫ್.ಹೆಚ್.ಎಸ್.ನಂದಿನಿಬಡಾವಣೆಯಲ್ಲಿ ಖರೀದಿ ಮಾಡಿದ ಮನೆ ನಂ.53/3ರ ನೋಂದಾವಣೆ ಖರ್ಚು<br>ಸದರಿ ಮನೆಯ ಖಾತೆ ಬದಲಾವಣೆ ಶುಲ್ಕ | 1,20,112-00<br>2,139-00 | 1<br>2 | 2 ರಿಂದ 7<br>19 |
| 3 | ಆರೋಪಿತ ಅಧಿಕಾರಿ ಶ್ರೀ ಹೆಚ್.ಸಿ.ನಾಗರಾಜ್ ರವರ ಮಗ ಶಮಂತ್ ಹೆಸರಿನಲ್ಲಿ ಬೆಂಗಳೂರು ಮನೆ ಸಂಖ್ಯೆ:53/6,ಎಸ್.ಎಫ್.ಹೆಚ್.ಎಸ್.ನಂದಿನಿ ಬಡಾವಣೆಯಲ್ಲಿಖರೀದಿ ಮಾಡಿದಮನೆ ನಂ.53/6ರ ನೋಂದಾವಣೆ ಖರ್ಚು<br>ಸದರಿ ಮನೆಯ ಖಾತೆ ಬದಲಾವಣೆ ಶುಲ್ಕ<br>ಸದರಿ ಮನೆಗೆ ಶ್ಯಾಮರಾವ್ ವಿಠ್ಠಲ್ ಕೋ-ಆಪರೇಟಿವ್ ಬ್ಯಾಂಕ್‌ನಲ್ಲಿ 10.00 ಲಕ್ಷ ಸಾಲ | 1,20,022-00<br>2,139-00<br>55,260-00 | **2**<br>**2**<br>**2** | **5 ರಿಂದ 12**<br>**19**<br>**2 ರಿಂದ26** |

| | | | | |
|---|---|---|---|---|
| | ಪಡೆದಿರುವ ಬಾಬ್ತು, ಅಸಲು ಮರುಪಾವತಿ, ಬಡ್ಡಿ, ಪ್ರೋಸೆಸಿಂಗ್ ಫೀ ಮತ್ತು ಕಾನೂನು ತಜ್ಞರ ಫೀ ಪಾವತಿಸಿರುವುದು.<br>ಸಾಲ ಪಡೆಯಲು ಬ್ಯಾಂಕ್‌ನೊಂದಿಗೆ ಕರಾರು ಮಾಡಿಕೊಂಡು ಸದರಿ ಕರಾರನ್ನು ನೋಂದಣಿ ಮಾಡಿರುವ ಖರ್ಚು | 10,390–00 | **2** | **30,33** |
| 4 | ಆರೋಪಿತರ ಪತ್ನಿ ಶ್ರೀಮತಿ ಟಿ.ಆರ್.ಕೋಕಿಲಾರವರ ಹೆಸರಿನಲ್ಲಿ ಶಿವಮೊಗ್ಗದ ಗೋಪಾಳದಲ್ಲಿ ಹೊಂದಿರುವ ಮನೆ ನಂ.168/10ನ್ನು ಖರೀದಿಸಿ ನೋಂದಣಿ ಮಾಡಿರುವ ಖರ್ಚು.<br>ಆರೋಪಿತರು ಕರ್ನಾಟಕ ಗೃಹ ಮಂಡಳಿಗೆ ಪಾವತಿಸಿರುವ ಬಡ್ಡಿ | 750–00<br>99,198–00 | **3**<br>**3** | **17**<br>**17** |
| 5 | ಆರೋಪಿತರ ಪತ್ನಿ ಶ್ರೀಮತಿ ಟಿ.ಆರ್.ಕೋಕಿಲಾರವರ ಹೆಸರಿನಲ್ಲಿ ಮೈಸೂರಿನ ಬನ್ನಿ ಮಂಟಪ ಎಂ.ಐ.ಜಿ. ಹುಡ್ಕೋ ಮನೆ ನಂ.5ಕ್ಕೆ ಕಂದಾಯ ಪಾವತಿಸಿರುವುದು .<br>ಶ್ರೀಮತಿ ಕೋಕಿಲಾರವರು 1992ನೇ ಸಾಲಿನಲ್ಲಿ ಖರೀದಿಸಿ ನೋಂದಣಿ ಮಾಡಿಸಿರುವ ಖರ್ಚು | 9,646–00<br>9,530–00 | **4**<br>**4** | **15 ರಿಂದ 17**<br>**17 ರಿಂದ 20** |
| 6 | ಶ್ರೀ ಹೆಚ್.ಸಿ. ನಾಗರಾಜ್ ರವರು ತಮ್ಮ ತಾಯಿ ಶ್ರೀಮತಿ ಪುಟ್ಟಮ್ಮನವರ ಹೆಸರಿನಲ್ಲಿ ತುಮಕೂರಿನ ವಿದ್ಯಾನಗರದ 2ನೇ ಕ್ರಾಸ್‌ನಲ್ಲಿ ನಿವೇಶನ ಖರೀದಿ ಮಾಡಿರುವ ಬಾಬ್ತು.<br>ಸದರಿ ನಿವೇಶನದಲ್ಲಿ ಕಟ್ಟಿರುವ ಮನೆಗೆ ನೀರು, ಕಂದಾಯ, ಯು.ಜಿ.ಡಿ. ಸಂಪರ್ಕ, ಮನೆ ಕಂದಾಯ ಖರ್ಚು | 11,680–00<br>24,883–00 | **5**<br>**5** | **33,34**<br>**4 ರಿಂದ 26** |
| 7 | ಶ್ರೀ ಹೆಚ್.ಸಿ. ನಾಗರಾಜ್‌ರವರು ತಮ್ಮ ಭಾವ ರಾಮಚಂದ್ರ ಇವರ ಹೆಸರಿನಲ್ಲಿ ಮೈಸೂರಿನಲ್ಲಿ ನಿವೇಶನ ಸಂಖ್ಯೆ: 896, ಚಿತ್ರಭಾನು ರಸ್ತೆ ಟಿಟಿಕೆ ಲೇಔಟಿನಲ್ಲಿ ಖರೀದಿಸಿರುವ ಸಂಧರ್ಭದಲ್ಲಿ ಪಾವತಿಸಿರುವ ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಶುಲ್ಕ.<br>ಸದರಿ ಮನೆಗೆ ಕಂದಾಯ ಪಾವತಿ.<br>ಕಟ್ಟಡವನ್ನು ಪರವಾನಗಿಯನ್ನು ಉಲ್ಲಂಘಿಸಿ ಕಟ್ಟಿದ್ದರಿಂದ ಪಾವತಿಸಿರುವ ದಂಡ ಶುಲ್ಕ | 1,04,430–00<br>15,102–00<br>8,950–00 | **6**<br>**6**<br>**6** | <br>**11**<br>**5,11** |
| 8 | ಶ್ರೀಹೆಚ್.ಸಿ.ನಾಗರಾಜ್‌ರವರು ತಮ್ಮ ಹೆಸರಿನಲ್ಲಿ ನಂ–38, ಸರ್. ಎಂ ವಿಶ್ವೇಶ್ವರಯ್ಯ ಬಡಾವಣೆ, 4ನೇ ಬ್ಲಾಕ್, ಬೆಂಗಳೂರಿನಲ್ಲಿ ಖರೀದಿಸಿರುವ ನಿವೇಶನ ನೋಂದಣಿ ಶುಲ್ಕ | 4,100–00 | **7** | **4, 10, 35** |

| | | | | |
|---|---|---|---|---|
| 9 | ಶ್ರೀ ಹೆಚ್.ಸಿ. ನಾಗರಾಜ್‌ರವರು ತಮ್ಮ ಮಗ ಶಮಂತ್ ಹೆಸರಿನಲ್ಲಿ ತುಮಕೂರಿನ ವಿದ್ಯಾನಗರ ಬಡಾವಣೆಯಲ್ಲಿ ಖರೀದಿಸಿರುವ ನಿವೇಶನ ಸಂಖ್ಯೆ: ಓ–1ಎ ನೋಂದಣಿ ಶುಲ್ಕ | 49,134–00 | **8** | **2** |
| 10 | ಶ್ರೀ ಹೆಚ್.ಸಿ. ನಾಗರಾಜ್ ರವರು ತಮ್ಮ ಮಗ ಶಮಂತ್ ಹೆಸರಿನಲ್ಲಿ ಶಿವಮೊಗ್ಗದ ಕಲ್ಲಹಳ್ಳಿ 2ನೇ ಹಂತದಲ್ಲಿ ಖರೀದಿಸಿರುವ ನಿವೇಶನ ಸಂಖ್ಯೆ: ಎಂ.ಐ.ಜಿ. 398–ಎ ಕಂದಾಯ ಪಾವತಿ. | 164–00 | **9** | **8** |
| 11 | ಶ್ರೀ ಹೆಚ್.ಸಿ.ನಾಗರಾಜ್ ರವರು ತಮ್ಮ ಹೆಸರಿನಲ್ಲಿ ನಿವೇಶನ ಸಂಖ್ಯೆ: 3969 ದಟ್ಟಗಳ್ಳಿ ಬಡಾವಣೆ, ಮೈಸೂರು, ಇದಕ್ಕೆ ಪಾವತಿಸಿರುವ ನಿವೇಶನ ತೆರಿಗೆ ಹಾಗೂ ನೋಂದಣಿ ಶುಲ್ಕ | 20,985–00 | **10** | **2,3,8,13,14, 17,18,19** |
| 12 | ಆರೋಪಿತರ ಪತ್ನಿ ಶ್ರೀಮತಿ ಟಿ.ಆರ್. ಕೋಕಿಲಾರವರ ತಾಯಿ ಶ್ರೀಮತಿ ರಾಜಮ್ಮ ನೀಡಿರುವ ತರೀಕೆರೆ ಜಮೀನು ನೋಂದಣಿ ಖರ್ಚು | 1,995–00 | **14** | **5,6,8** |
| 13 | ಆರೋಪಿತರ ಪತ್ನಿ ಶ್ರೀಮತಿ ಟಿ.ಆರ್.ಕೋಕಿಲಾರವರ ಶಿವಮೊಗ್ಗ ಎಸ್.ಬಿ.ಐ.ಖಾತೆ ಸಂಖ್ಯೆ: 10482594534 ರಲ್ಲಿ ಸಾಲವಾಗಿ 2,56,000 ಪಡೆದ ನಂತರ ಅಸಲು ಬಡ್ಡಿ ಮತ್ತು ಪ್ರೊಸೆಸಿಂಗ್ ಫೀ ಪಾವತಿ | 2,75,473–00 | **18** | **10,11** |
| 14 | ಆರೋಪಿತ ಶ್ರೀ ಹೆಚ್.ಸಿ. ನಾಗರಾಜ್ ರವರು ವಿಜಯಾ ಬ್ಯಾಂಕ್, ಮಧುಗಿರಿಯಲ್ಲಿ ಗೃಹ ಸಾಲ ರೂ. 2,74,000/– ಪಡೆದಿರುವ ಬಾಬ್ತು ಅಸಲು ಮತ್ತು ಬಡ್ಡಿ ಪಾವತಿ | 3,29,425–00 | **20** | **2** |
| 15 | ಪಾವಗಡ ಸೌಹಾರ್ದ ಪತ್ತಿನ ಸಹಕಾರಿ ಸಂಘದಲ್ಲಿ ಆರೋಪಿತರು ತಮ್ಮ ಪತ್ನಿ ಕೋಕಿಲಾ ಮಕ್ಕಳಾದ ಶಿಲ್ಪಶ್ರೀ, ಬಿಂದುಶ್ರೀ, ಶಮಂತ್ ಮತ್ತು ಸಂಬಂಧಿಕರಾದ ರಾಮಚಂದ್ರ, ಶೋಭಾರಾಣಿ ಮತ್ತು ಗಜೇಂದ್ರ ಇವರುಗಳ ಹೆಸರುಗಳಲ್ಲಿ ಷೇರು ಖರೀದಿ ಮಾಡಿರುವುದು | 8,325–00 | **24** | **2** |
| 16 | ಆರೋಪಿತ ಶ್ರೀ ಹೆಚ್.ಸಿ.ನಾಗರಾಜ್‌ರವರ ತಾಯಿ ಶ್ರೀಮತಿ ಪುಟ್ಟಮ್ಮನವರ ಹೆಸರಿನಲ್ಲಿ ತುಮಕೂರು ವಿದ್ಯಾನಗರ 2ನೇ ಕ್ರಾಸ್ ನಲ್ಲಿರುವ ಚೆಲುವ ಕೃಪ ಮನೆಗೆ ವಿದ್ಯುತ್ ಸಂಪರ್ಕ ಪಡೆದಿರುವ ಖರ್ಚು | 50,460–00 | **33** | **1,2** |
| 17 | ಆರೋಪಿತರ ಪತ್ನಿ ಶ್ರೀಮತಿ ಟಿ.ಆರ್.ಕೋಕಿಲಾರವರ ಹೆಸರಿನಲ್ಲಿರುವ ಸ್ಥಿರದೂರವಾಣಿ ಕರೆಗಳ ಹಣ ಪಾವತಿ | 18,777–00 | **34** | **3** |
| 18 | ಶ್ರೀ ಹೆಚ್.ಸಿ. ನಾಗರಾಜ್ ರವರು ಶಿವಮೊಗ್ಗದ ಎಂ.ಐ.ಜಿ.10 ಗೋಪಾಳದಲ್ಲಿ ವಾಸವಿದ್ದಾಗ ಅನಿಲ ಸಂಪರ್ಕ ಪಡೆದಿರುವ ಖರ್ಚು | 2,414–00 | **35** | **4,5** |

| | | | | |
|---|---|---|---|---|
| 18ಎ | ಅಕಲ್ ಏಜೆನ್ಸಿ, ತುಮಕೂರು ರವರಿಂದ ಪಡೆದಿರುವ ಅನಿಲ ಸಂಪರ್ಕ ಖರ್ಚು | 10,200–00 | **35** | **6** |
| 19 | ಆರೋಪಿತ ಶ್ರೀ ಹೆಚ್.ಸಿ. ನಾಗರಾಜ್ ರವರ ಕಾರ್ ಸಂಖ್ಯೆ: ಕೆಎ02–ಪಿ–864 ಇದರ ಇಂಧನ ಮತ್ತು ನಿರ್ವಹಣಾ ವೆಚ್ಚ | 1,62,536–00 | **36** | **7,8** |
| 19ಎ | ಆರೋಪಿತರು ಹೊಂದಿರುವ ಕೆಎ02–ಇಎಲ್–7113 ಹೊಂಡಾ ಆಕ್ಟೀವಾ ದ್ವಿಚಕ್ರವಾಹನದ ತೆರಿಗೆ ವಿಮ, ನಿರ್ವಹಣಾ ವೆಚ್ಚ ಮತ್ತು ಇಂಧನ ವೆಚ್ಚ | 22,195–00 | **36** | **12** |
| 20 | ಆರೋಪಿತ ಹೆಚ್.ಸಿ. ನಾಗರಾಜ್ ರವರ ಮಕ್ಕಳಾದ ಶಿಲ್ಪಶ್ರೀ, ಬಿಂದುಶ್ರೀ, ಶಮಂತ್ ರವರ ವಿದ್ಯಾಭ್ಯಾಸದ ಖರ್ಚು | 46,021–00 | **39** | **1ರಿಂದ11** |
| 21 | ಆರೋಪಿತ ಹೆಚ್.ಸಿ. ನಾಗರಾಜ್ ರವರ ಮಗಳಾದ ಶಿಲ್ಪಶ್ರೀ ಮದುವೆಗೆ ಕಲ್ಯಾಣ ಮಂಟಪಕ್ಕೆ ಪಾವತಿಸಿರುವ ಖರ್ಚು | 11,700–00 | **42** | **3** |
| 22 | ಆರೋಪಿತ ಹೆಚ್. ಸಿ. ನಾಗರಾಜ್ ರವರ ಜರ್ಮನ್‌ಷಪರ್ಡ್ ನಾಯಿ ಸಾಕಾಣಿಕೆ ಖರ್ಚು | 22,000–00 | **38** | **2** |
| | ಒಟ್ಟು | 22,83,900–00 | | |

ಆಪಾದಿತರು ಮತ್ತು ಅವರ ಕುಟುಂಬದವರು ಪರಿಶೀಲನಾ ಅವಧಿಯಲ್ಲಿ ಮಾಡಿರುವ ಒಟ್ಟು ಖರ್ಚು ರೂ. 22,83,900–00

ತನಿಖಾಧಿಕಾರಿಗಳಾದ ಶ್ರೀ ಎನ್.ಟಿ. ಅಶ್ವತ್ಥನಾರಾಯಣ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ತುಮಕೂರು, ಇವರು ಶ್ರೀ ಹೆಚ್.ಸಿ. ನಾಗರಾಜ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ತುಮಕೂರು, ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ, 07/2007 ರಲ್ಲಿ ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ದೂರನ್ನು ದಾಖಲಿಸಿಕೊಂಡಿರುತ್ತಾರೆ.

ಮೇಲ್ಕಂಡಂತೆ ಪ್ರಕರಣವನ್ನು ದಾಖಲಿಸಿದ ನಂತರ ತನಿಖಾಧಿಕಾರಿಗಳು

(1) "ಚೆಲುವ ಕೃಪ" 2ನೇ ಕ್ರಾಸ್, ವಿದ್ಯಾನಗರ, ತುಮಕೂರು.

(2) ಆರೋಪಿತ ಕಛೇರಿ.

(3) ಯೂಕೋ ಬ್ಯಾಂಕ್ ಭದ್ರತಾ ಕೊಠಡಿ, ತುಮಕೂರು.

(4) ತುಮಕೂರು ಸಿದ್ಧಗಂಗಾ ಬಡಾವಣೆ ಎಸ್.ಬಿ.ಎಂ. ಬ್ಯಾಂಕ್

ಮೇಲ್ಕಂಡ ಸ್ಥಳಗಳನ್ನು ದಿನಾಂಕ, 30–5–2007, 30–5–2007, 4–7–2007 ಮತ್ತು 2–11–2008 ರಂದು ಪಂಚ ಸಾಕ್ಷಿಗಳ ಸಮಕ್ಷಮ ಶೋಧಿಸಿರುತ್ತಾರೆ. ಈ ಸಂದರ್ಭದಲ್ಲಿ ಬರೆಯಲಾದ ಶೋಧನಾ ಮಹಜರ್‌ಗಳ ಪ್ರಕಾರ ಆಪಾದಿತರ ಚರ ಮತ್ತು ಸ್ಥಿರಾಸ್ತಿ ಅಂದರೆ ಗೃಹೋಪಯೋಗಿ ಉಪಕರಣಗಳು, ಚಿನ್ನ ಮತ್ತು ಬೆಳ್ಳಿ, ಬ್ಯಾಂಕ್ ಡೆಪಾಸಿಟ್‌ಗಳು, ವಾಹನಗಳು, ನಿವೇಶನಗಳು ಹಾಗೂ ಜಮೀನು ಇವುಗಳನ್ನೊಳಗೊಂಡಂತೆ ಆಸ್ತಿಗಳು ಮತ್ತು ಇವುಗಳಿಗೆ ಸಂಬಂಧಿಸಿದ ದಾಖಲೆಗಳು ಪತ್ತೆಯಾಗಿರುತ್ತದೆ.

ಸದರಿ ಪ್ರಕರಣದ ತನಿಖೆಯು ಪೂರ್ಣಗೊಂಡ ನಂತರ ಆಪಾದಿತ ಸರ್ಕಾರಿ ಅಧಿಕಾರಿ ಶ್ರೀ ಹೆಚ್. ಸಿ. ನಾಗರಾಜ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರು ದಿನಾಂಕ, 12–10–1981 ರಿಂದ ದಿನಾಂಕ 30–5–2007 ರವರೆಗಿನ "ಚೆಕ್ ಪೀರಿಯಡ್" ನಲ್ಲಿ ಒಟ್ಟು 3,02,64,639–14 ರೂ.ಗಳ ಆಸ್ತಿಯನ್ನು ಹೊಂದಿರುತ್ತಾರೆಂದು ಮತ್ತು ಈ ಅವಧಿಯಲ್ಲಿ ಆಪಾದಿತರು ತಮ್ಮ ಮತ್ತು ತಮ್ಮ ಕುಟುಂಬದ ಸದಸ್ಯರುಗಳಿಗಾಗಿ ಮಾಡಿರುವ ಒಟ್ಟು ಖರ್ಚು ರೂ. 22,83,900–00 ಗಳಾಗಿದ್ದು, ಆಪಾದಿತರು ಈ ಅವಧಿಯಲ್ಲಿ ಎಲ್ಲಾ ಬಲ್ಲ ಮೂಲಗಳಿಂದ ಗಳಿಸಿರುವ ಆದಾಯವು ರೂ. 2,84,74,449,–00 ರೂ. ಗಳಾಗಿರುತ್ತವೆ. ಎಂದು ಕಂಡುಬಂದಿರುತ್ತದೆ. ಆಪಾದಿತ ಆಸ್ತಿ ಮತ್ತು ಖರ್ಚಿನ ಒಟ್ಟು ಮೊತ್ತ ರೂ.3,25,48,539–14 ರೂಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಮೊತ್ತವು ರೂ.2,84,74,449–00 ಗಳಾಗಿರುತ್ತದೆ. ಅಂದರೆ, ಆಪಾದಿತ ಸಾರ್ವಜನಿಕ ಅಧಿಕಾರಿ ಶೇ. 698.91 ರಷ್ಟು ತಮ್ಮ ಎಲ್ಲಾ ಬಲ್ಲ ಮೂಲಗಳಿಗಿಂತಲೂ ಹೆಚ್ಚಿನ ಪ್ರಮಾಣದ ಆಸ್ತಿಯನ್ನು

ಹೊಂದಿರುವುದು ಕಂಡು ಬಂದಿರುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮಾಧಾನಕರ ವಿವರಣೆ ಅಥವಾ ಲೆಕ್ಕ ಲಭ್ಯವಿರುವುದಿಲ್ಲ.

ಆದ್ದರಿಂದ ಶ್ರೀ ಹೆಚ್. ಸಿ. ನಾಗರಾಜ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ)ರ ಜೊತೆ ಕಲಂ 13(2)ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಆಪಾದಿತ ಸರ್ಕಾರಿ ನೌಕರರು ತಮ್ಮ 'ಬಲ್ಲ ಮೂಲ'ಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಸ್ತಿಯನ್ನು ಗಳಿಸಿ ಅಪರಾಧಿಕ ದುರ್ನಡತೆ ಎಸಗಿರುವುದರಿಂದ ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅತ್ಯವಶ್ಯಕ.

ಶ್ರೀ ಹೆಚ್.ಸಿ. ನಾಗರಾಜ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ವಿರುದ್ಧ ಬಲ್ಲ ಮೂಲಗಳಿಗಿಂತ ಹೆಚ್ಚಿನ ಆಸ್ತಿ ಹೊಂದಿರುವ ಬಗ್ಗೆ ಲೋಕಾಯುಕ್ತ, ತುಮಕೂರು, ಇವರು ತನಿಖೆಯನ್ನು ಕೈಗೊಂಡಿದ್ದು, ಈಗ ತನಿಖೆಯನ್ನು ಪೂರ್ಣಗೊಳಿಸಿ, ತಮ್ಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಲೋಕಾಯುಕ್ತ ವರದಿಯ ಪ್ರಕಾರ ಶ್ರೀ ಹೆಚ್. ಸಿ. ನಾಗರಾಜ್‌ರವರು ದಿನಾಂಕ, 12-10-1981ರಿಂದ ಅಂದರೆ ಸೇವೆಗೆ ಸೇರಿದ ದಿನಾಂಕದಿಂದ 30-5-2007ರ ವರೆಗೆ ರೂ. 40,74,090-00 ಗಳಷ್ಟು ಆದಾಯಗಳಿಸಿದ್ದು, ಇದೇ ಅವಧಿಯಲ್ಲಿ ಇವರು ಒಟ್ಟು ರೂ.3,25,48,539,-14 ರಷ್ಟು ಆಸ್ತಿ ಗಳಿಸಿರುತ್ತಾರೆ. ಇದರೊಂದಿಗೆ ಈ ಅವಧಿಯಲ್ಲಿ ಇವರು ಬಲ್ಲ ಆದಾಯಕ್ಕಿಂತ ರೂ.2,84,74,449-00 ಅಂದರೆ ಶೇ. 698.91 ರಷ್ಟು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿಸಿ, ಲಂಚ ನಿರೋಧ ಕಾಯ್ದೆಯಡಿ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸರ್ಕಾರದ ಪೂರ್ವಾನುಮತಿ ಕೋರಿರುತ್ತಾರೆ. ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸಾಕಷ್ಟು ದಾಖಲೆಗಳು, ಪುರಾವೆಗಳು ಇವೆ ಎಂದು ಲೋಕಾಯುಕ್ತರು ತಿಳಿಸಿರುವುದರಿಂದ ಶ್ರೀ ಹೆಚ್.ಸಿ. ನಾಗರಾಜ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರು ಬಲ್ಲ ಮೂಲಗಳಿಗಿಂತ ಹೆಚ್ಚಿನ ಆಸ್ತಿ, ಆದಾಯ ಹೊಂದಿರುವ ಆಪಾದನೆಯ ಮೇಲೆ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರವು ನಿರ್ಧರಿಸಿದೆ.

ಆಪಾದಿತರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ 13(1)(ಇ) ಮತ್ತು ಜೊತೆಗೆ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ. ಅದರಂತೆ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (4)ರ ಸರ್ಕಾರಿ ಆದೇಶವನ್ನು ಹೊರಡಿಸಲಾಗಿತ್ತು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (5)ರ ಅಪರ ಪೊಲೀಸ್ ಮಹಾ ನಿರ್ದೇಶಕರ ಪತ್ರ ದಿನಾಂಕ, 03.12.2009 ರಲ್ಲಿ ಸರ್ಕಾರ ಹೊರಡಿಸಿರುವ ಅಭಿಯೋಜನಾ ಮಂಜೂರಾತಿ ಆದೇಶದಲ್ಲಿ ಕೆಲವೊಂದು ನ್ಯೂನತೆಗಳನ್ನು ಸರಿಪಡಿಸಿ, ಪರಿಷ್ಕೃತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತಾರೆ. ಆದ್ದರಿಂದ ಲಂಚನಿರೋಧ ಕಾಯ್ದೆ 1988ರ ಕಲಂ 19(1)(ಸಿ) ರಡಿ ಆಪಾದಿತ ನೌಕರರಾದ ಶ್ರೀ ಹೆಚ್.ಸಿ. ನಾಗರಾಜ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಅಧಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಪರಿಷ್ಕೃತ ಮಂಜೂರಾತಿ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 38 ವಾತೆತ 2007, ಬೆಂಗಳೂರು, ದಿನಾಂಕ: 30-12-2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಸಿ. ನಾಗರಾಜ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ, ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಲಂಚ ನಿರೋಧಕ ಕಾಯ್ದೆ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ-19ರನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 30-12-2009 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 129

**(ಎಲ್.ಎಸ್. ವಾಸನ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2)

**ಇಂಧನ ಸಚಿವಾಲಯ**

ವಿಷಯ: ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕಲ್ಲಿದ್ದಲನ್ನು ಖರೀದಿಸುವಲ್ಲಿ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಪವರ್ ಟ್ರಾನ್ಸ್‌ಫಾರ್ಮರ್ ಖರೀದಿಸುವಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ವಿಚಾರಣೆ ನಡೆಸುವ ಕುರಿತು.

ಓದಲಾಗಿದೆ: 1) ಸರ್ಕಾರಿ ಆದೇಶ ಸಂಖ್ಯೆ : ಇಎನ್ 125 ಪಿಪಿಸಿ 2009 ದಿನಾಂಕ: 13.10.2009

2) Central Pension Accounting Office, ಭಾರತ ಸರ್ಕಾರ ಇವರ ಪತ್ರ ದಿನಾಂಕ: 18.07.2009.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶ (1) ರಲ್ಲಿ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಜಸ್ಟೀಸ್ ಶ್ರೀ ವಿ.ಪಿ.ಮೋಹನ್ ಕುಮಾರ್‌ರವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕಲ್ಲಿದ್ದಲನ್ನು ಖರೀದಿಸುವಲ್ಲಿ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಪವರ್ ಟ್ರಾನ್ಸ್‌ಫಾರ್ಮರ್ ಖರೀದಿಸುವಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ ಹಾಗೂ ಸದರಿ ಆದೇಶದಲ್ಲಿ ವಿಚಾರಣೆ ನಡೆಸುವ ನಿವೃತ್ತ ನ್ಯಾಯಾಧೀಶರ ನಿಬಂಧನೆ ಮತ್ತು ಷರತ್ತುಗಳನ್ನು ಪ್ರತ್ಯೇಕ ಆದೇಶದಲ್ಲಿ ಹೊರಡಿಸಲಾಗುವುದೆಂದು ತಿಳಿಸಲಾಗಿದೆ.

ಮೇಲೆ ಓದಲಾದ ಪತ್ರ (2) ರಲ್ಲಿ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರಿಗೆ ರೂ.90,000/– (fixed) ವೇತನ ಹಾಗೂ ಮಾಸಿಕ ನಿವೃತ್ತಿ ವೇತನ ರೂ.22,900/– (01.01.2006 ರಿಂದ Basic Pension)ನಿಗಧಿಪಡಿಸಿರುವುದನ್ನು ಗಣನೆಗೆ ತೆಗೆದುಕೊಂಡು ಅವರಿಗೆ ಮಾಸಿಕ ವೇತನ, ಮನೆ ಭತ್ಯೆ ಹಾಗೂ ಆತಿಥ್ಯ ಭತ್ಯೆಯನ್ನು (Sumptuary Allowance) ನಿಗಧಿಪಡಿಸುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್125 ಪಿಪಿಸಿ 2009, ಬೆಂಗಳೂರು, ದಿನಾಂಕ:14–12–2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಸ್ಟೀಸ್ ಶ್ರೀ ವಿ.ಪಿ.ಮೋಹನ್ ಕುಮಾರ್‌ರವರಿಗೆ ಅವರು ಈಗಾಗಲೇ ಪಡೆಯುತ್ತಿರುವ ಮಾಸಿಕ ರೂ.22,900/– ನಿವೃತ್ತಿ ವೇತನವನ್ನು ಕಳೆದು ರೂ.67,100/– ಮಾಸಿಕ ವೇತನ, ಮನೆಭತ್ಯೆ, ಆತಿಥ್ಯ ಭತ್ಯೆಯನ್ನು ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1766 ವೆಚ್ಚ 1/09 ದಿನಾಂಕ: 08.12.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.130

**(ಎಸ್.ಜೆ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ :** ಪರಿಹಾರಾತ್ಮಕ ನೆಡುತೋಪುಗಳ ದರ ಪರಿಷ್ಕರಣೆ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಅಪಜೀ 44 ಎಫ್‌ಎಪಿ 96, ದಿನಾಂಕ : 03–02–1997.

**2.** ಸರ್ಕಾರಿ ಆದೇಶ ಸಂಖ್ಯೆ : ಅಪಜೀ 156 ಎಫ್‌ಎಪಿ 2002, ದಿನಾಂಕ : 28–11–2002.

**3.** ಸರ್ಕಾರಿ ಆದೇಶ ಸಂಖ್ಯೆ : ಅಪಜೀ 102 ಎಫ್‌ಎಪಿ 2008, ದಿನಾಂಕ : 15–10–2008.

**4.** ಸರ್ಕಾರಿ ಆದೇಶ ಸಂಖ್ಯೆ : ಅಪಜೀ 102 ಎಫ್‌ಎಪಿ 2008, ದಿನಾಂಕ : 11–12–2008.

**5.** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಎ5(6)ಜಿಎಫ್ ಎಲ್/ಸಿಆರ್/28/2009–10, ದಿನಾಂಕ : 22–10–2009

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 03–02–1997ರ ಆದೇಶದಲ್ಲಿ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ರೂ. 30,000–00 ಗಳನ್ನು ನಿಗಧಿಪಡಿಸಿ, ದಿನಾಂಕ 01–04–1996 ರಿಂದ ಜಾರಿಯಲ್ಲಿರುತ್ತದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 28–11–2002ರ ಆದೇಶದಲ್ಲಿ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ರೂ. 54,200–00 ಗಳನ್ನು ನಿಗಧಿಪಡಿಸಿ, ದಿನಾಂಕ 01–04–2001 ರಿಂದ ಜಾರಿಯಲ್ಲಿರುತ್ತದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 15–10–2008ರ ಆದೇಶದಲ್ಲಿ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ರೂ. 54,200–00 ಗಳಿಂದ ರೂ. 84,000/– ಗಳಿಗೆ ಹೆಚ್ಚಿಸಿ ಉಪಯೋಗಿತ ಸಂಸ್ಥೆಗಳಿಂದ ವಸೂಲಿ ಮಾಡಲು ಹಾಗೂ ದಿನಾಂಕ 01–10–2008 ರಿಂದ ಜಾರಿಯಲ್ಲಿರುತ್ತದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ 11–12–2008ರ ಆದೇಶದಲ್ಲಿ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ದಿನಾಂಕ: 01–10–2008 ರಿಂದ ಜಾರಿಗೆ ಬರುವಂತೆ ರೂ. 54,200–00 ಗಳಿಂದ ರೂ. 84,000–00 ಗಳಿಗೆ ಹೆಚ್ಚಿಸಿರುವುದನ್ನು ಮಾರ್ಪಡಿಸಿ, ದಿನಾಂಕ : 01–04–2008 ರಿಂದ ಪೂರ್ವಾನ್ವಯವಾಗಿ ರೂ. 84,000–00 ಗಳಂತೆ ಉಪಯೋಗಿತ ಸಂಸ್ಥೆಗಳಿಂದ ವಸೂಲಿ ಮಾಡಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಅಧಿಕೃತ ಜ್ಞಾಪನ ಸಂಖ್ಯೆ : ಡಿ1/ಬಿಯುಡಿ/ಸಿಆರ್/36/2009–10. ದಿನಾಂಕ : 11–06–2009ರನ್ವಯ ದಿನಾಂಕ: 01–04–2009 ರಿಂದ ಜಾರಿಗೆ ಬರುವಂತೆ ಮಂಜೂರಾದ ಅನುಸೂಚಿತ ಸಾಮಾನ್ಯ ದರಗಳನ್ನು ಹೆಚ್ಚಿಸಲಾಗಿದ್ದು, ಇದರನ್ವಯ ಮಂಜೂರಾದ ಸಾಮಾನ್ಯ ದರಗಳೂ 0% ರಿಂದ ಶೇಕಡ 30.85ಕ್ಕೆ ಹೆಚ್ಚಿರುತ್ತದೆ. 2009–10ನೇ ಸಾಲಿನ ದರದನ್ವಯ ನೆಡುತೋಪು ಬೆಳೆಸುವ ಮತ್ತು ಆಡಳಿತಾತ್ಮಕ ವೆಚ್ಚ ಸೇರಿ ಪ್ರತಿ ಹೆಕ್ಟೇರ್ ಗೆ ರೂ. 94,000–00 ಗಳಾಗುವುದು. ಇದರಿಂದ ಹಿಂದಿನ ವರ್ಷಕ್ಕಿಂತ ಶೇಕಡ 11.09 ರಷ್ಟು ದರಗಳು ಹೆಚ್ಚಾಗಿದೆ. ಈ ಮೇರೆಗೆ ದಿನಾಂಕ : 01–04–2009 ರಿಂದ ಜಾರಿಗೆ ಬರುವಂತೆ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗುಲುವ ವೆಚ್ಚವನ್ನು ರೂ. 84,000/– ಗಳಿಂದ ರೂ. 94,000/– ಗಳಿಗೆ ಹೆಚ್ಚಿಸಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ದಿನಾಂಕ : 01–04–2009 ರಿಂದ ಜಾರಿಗೆ ಬರುವಂತೆ, ಪ್ರತಿ ಹೆಕ್ಟೇರ್‌ಗೆ ರೂ. 84,000–00 ಗಳಿಂದ ರೂ. 94,000–00 ಗಳಿಗೆ ಹೆಚ್ಚಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 242 ಎಫ್‌ಎಪಿ 2009, ಬೆಂಗಳೂರು, ದಿನಾಂಕ: 08ನೇ ಜನವರಿ 2010.**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ದಿನಾಂಕ: 01–04–2009 ರಿಂದ ಜಾರಿಗೆ ಬರುವಂತೆ ರೂ. 84,000–00 ಗಳಿಂದ ರೂ. 94,000–00 ಗಳಿಗೆ ಹೆಚ್ಚಿಸಿ ಉಪಯೋಗಿತ ಸಂಸ್ಥೆಗಳಿಂದ ವಸೂಲು ಮಾಡಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 151

**(ಪಿ.ಆರ್. ಕಲಾವತಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಕೃಷಿ ಸಚಿವಾಲಯ

**ವಿಷಯ :** ಶ್ರೀ ಎಸ್.ಡಿ. ಹಿರೇರೆಡ್ಡಿ, ಸಹಾಯಕ ಕೃಷಿ ನಿರ್ದೇಶಕರು, (ಕೇಂದ್ರ). ಜಂಟಿ ಕೃಷಿ ನಿರ್ದೇಶಕರ ಕಚೇರಿ, ಬೆಳಗಾವಿ, ಇವರಿಗೆ ಸ್ವ ಇಚ್ಚಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ :** ಕೃಷಿ ಆಯುಕ್ತರ ಪತ್ರ ಸಂಖ್ಯೆ : ಕೃಸಿಪ–1/ವಿವ 63/2009–10, ದಿನಾಂಕ 30–11–2009.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಶ್ರೀ ಎಸ್.ಡಿ. ಹಿರೇರೆಡ್ಡಿ, ಸಹಾಯಕ ಕೃಷಿ ನಿರ್ದೇಶಕರು, (ಕೇಂದ್ರ). ಜಂಟಿ ಕೃಷಿ ನಿರ್ದೇಶಕರ ಕಚೇರಿ, ಬೆಳಗಾವಿ, ಇವರು ಅನಾರೋಗ್ಯ ಕಾರಣಗಳಿಂದಾಗಿ ಸ್ವಯಂ ನಿವೃತ್ತಿ ಹೊಂದಲು ಅನುಮತಿ ಕೋರಿ ಸಲ್ಲಿಸಿರುವ ದಿನಾಂಕ : 09–09–2009ರ ಮನವಿಯೊಂದಿಗೆ ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವಾದ್ದರಿಂದ ಬಾಕಿ/ಬೇಬಾಕಿ ಪತ್ರಗಳ ನಿರೀಕ್ಷಣಾ

ಷರತ್ತುಗಳಿಗೊಳಪಟ್ಟು ದಿನಾಂಕ : 31–12–2009 ರಿಂದ ಅನ್ವಯಿಸುವಂತೆ ಸ್ವ ಇಚ್ಛಾ ನಿವೃತ್ತಿಗೆ ಅನುಮತಿ ನೀಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 280 ಕೃಪಸೇ 2009, ಬೆಂಗಳೂರು, ದಿನಾಂಕ: 08ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಎಸ್.ಡಿ. ಹಿರೇರೆಡ್ಡಿ, ಸಹಾಯಕ ಕೃಷಿ ನಿರ್ದೇಶಕರು, (ಕೇಂದ್ರ). ಜಂಟಿ ಕೃಷಿ ನಿರ್ದೇಶಕರ ಕಚೇರಿ, ಬೆಳಗಾವಿ, ಇವರಿಗೆ ಅವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಅದನ್ನು ಅವರಿಗೆ ನೀಡಬೇಕಾದ ನಿವೃತ್ತಿ ಸವಲತ್ತುಗಳಿಂದ ವಸೂಲಿ ಮಾಡುವ ಷರತ್ತುಗೊಳಪಟ್ಟು ದಿನಾಂಕ : 31–01–2010 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958 ರ ನಿಯಮ 285(1) (ಬಿ) ಅನ್ವಯ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 152

**(ಜಿ.ಕೆ. ಗುರಾಣಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ.

## WATER RESOURCES SECRETARIAT

**Sub :** According Administrative Approval to the Minor Irrigation Projects under Accelerated Irrigation Benefit Programme-Regarding.

**Read :** Letter No. CEMI(S)/TA-3/AE-10/AIBP/2009-10/4925 dt. 22.12.2009 from the Chief Engineer, Minor Irrigation South Zone, Bangalore.

**Preamble :**

As per the modified guidelines issued by the Government of India, Minor Irrigation schemes with potential of more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category states. 81 taluks in the State are approved under Drought Prone Area Programme (DPAP). Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP), Central Assistance will be in the form of Central Grant that will be 90% of the project cost. The balance cost of the project will have to be borne by the State as state's share.

Government of Karnataka has identified new Minor Irrigation Schemes in these taluks for seeking Government of India approval under AIBP. Finance Department, Government of Karnataka has also approved the proposal of the Water Resources Department (Minor Irrigation) for according Approval to such schemes. The Chief Engineer, Minor Irrigation South Zone in the letter read above has requested for according administrative approval to the estimates of the works proposed under AIBP. Accordingly the following schemes in DPAP taluks are being considered for according administrative approval.

Head of Account 4702-00-101-1-10-139 AIBP Major Works Amount Rs. In lakhs.

| Sl. No. | Name of the Scheme | District | Taluka | Estimated Cost | Potential Planned Ha. | Cost per Ha. (Rs.in lakhs) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Construction of Pickup across waste weir halla of suvarnamukhi river near Badakanahalli. Sira Tq, Tumkur Dist. | Tumkur | Sira | 82.20 | 200.00 | 0.41 |

| | | | | | | |
|---|---|---|---|---|---|---|
| 2 | Construction of Pickup between sy.No. 78/3 & 16 of Maragondanahalli of Irakasandra tank waste weir in Kortagere Tq. Tumkur Dist. | Tumkur | Kortagere | 35.00 | 50.00 | 0.70 |
| 3 | Construction of Idukani pickup channel in Kasaba Hobli | Chikka-magalur | Mudigere | 60.00 | 50.00 | 1.20 |
| | **Total** | | | **177.20** | | |

**Government Order No. SANEEYEE 236 MASAVI 2009 (23), Bangalore, Dated 07th January 2010**

In view of the above, the Administrative approval is hereby accorded for taking up the above 3 works with an estimated cost totaling to Rs. 177.20 lakhs (One hundred Seventy seven lakhs twenty thousand only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed within a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt. and State Govt.
4. The Central share is in the form of grant to the State.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintainance and the scheme shall handed over to the same after its construction for the O & M.

This Order is issued with the concurrence of Finance Department in their note No. PWD-890-FC-1/2009 dated 09.12.2009.

By Order and in the name of the Governor of Karnataka,

**(K. SUDHAKARA SHETTY)**

PR. 153

Under Secretary to Government,

Water Resources Department (Minor Irrigation)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎ.ಎಂ. ಗೌಣಿ ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಇತರರ ವಿರುದ್ಧ ಜಂಟೀ ಇಲಾಖಾ ವಿಚಾರಣೆ – ಶ್ರೀ ಎನ್.ಕೆ. ರಂಗಯ್ಯ ಮತ್ತು ಶ್ರೀ ಎನ್. ಶರಣಪ್ಪ ರವರನ್ನು ವಿಚಾರಣೆಯಿಂದ ಕೈಬಿಡುವ ಬಗ್ಗೆ ಆದೇಶ.

**ಓದಲಾಗಿದೆ :**
1. ದಿನಾಂಕ 29–08–2006 ರ ಸರ್ಕಾರಿ ಪತ್ರ ಸಂಖ್ಯೆ : ಸಿಆಸುಇ 056 ಎಸ್ಇಎನ್ 98.
2. ದಿನಾಂಕ 21–03–2007 ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 056 ಎಸ್ಇಎನ್ 98.
3. ಜಿಲ್ಲಾಧಿಕಾರಿಗಳು, ಕೊಪ್ಪಳ ಇವರ ದಿನಾಂಕ : 16–07–09 ರ ವರದಿ ಸಂಖ್ಯೆ : ಕಂದಾಯ/ ಸಿಸಿಎ/5/2001–02.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ, ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕು ಕಛೇರಿಯಲ್ಲಿ ಈ ಹಿಂದೆ ಶ್ರೀ ಎ.ಎಂ. ಗೌಣಿ ಮತ್ತು ಶ್ರೀ ಜಿ. ತಿಮ್ಮಯ್ಯ, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿಗಳು ತಹಶೀಲ್ದಾರರ ಹುದ್ದೆಯಲ್ಲಿ ಶ್ರೀ ಓಬಣ್ಣ ಮತ್ತು ಶ್ರೀ ಎನ್. ಶರಣಪ್ಪ, ಕಂದಾಯ ನಿರೀಕ್ಷಕರ ಹುದ್ದೆಯಲ್ಲಿ, ಶ್ರೀ ಎನ್.ಕೆ. ರಂಗಯ್ಯ, ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ, ಶ್ರೀ ಶ್ರೀನಿವಾಸಾಚಾರಿ ಮತ್ತು ಶ್ರೀ ವಸಂತಮಾಧವ, ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ ಮತ್ತು ಶ್ರೀ ಡಿ. ವೆಂಕಟೇಶ, ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, 1981–82 ನೇ ಸಾಲಿನಲ್ಲಿ ಸರ್ಕಾರಿ ಜಮೀನುಗಳನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳನ್ನು ಉಲ್ಲಂಘಿಸಿ ಮಂಜೂರು ಮಾಡಿರುವ ಆರೋಪ ಕುರಿತು, ಇವರುಗಳ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11 ಮತ್ತು 11–ಎ ರಡಿ ಆರೋಪ ಪಟ್ಟಿಯನ್ನು ಸಿದ್ದಗೊಳಿಸಿ, ಗ್ರೂಪ್–ಸಿ ವೃಂದದ ನೌಕರರಾದ ಶ್ರೀ ಎನ್.ಕೆ. ರಂಗಯ್ಯ, ಶ್ರೀ ಎನ್. ಶರಣಪ್ಪ ಮತ್ತಿತರರಿಗೆ ದಿನಾಂಕ : 29–08–2006 ರ ನೋಟೀಸು ಸಂಖ್ಯೆ : ಸಿಆಸುಇ 056 ಎಸ್ಇಎನ್ 98 ಅನ್ನು ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಕೊಪ್ಪಳ ಇವರ ಮೂಲಕ ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ, ಸರ್ಕಾರದಿಂದ ಜಾರಿಗೊಳಿಸಲಾದ ನೋಟೀಸಿಗೆ ಶ್ರೀ ಎನ್.ಕೆ. ರಂಗಯ್ಯ ಮತ್ತು ಶ್ರೀ ಎನ್. ಶರಣಪ್ಪ ಇವರುಗಳನ್ನು ಹೊರತುಪಡಿಸಿ ಉಳಿದ ಆಪಾದಿತರು ಲಿಖಿತ ಹೇಳಿಕೆ ಸಲ್ಲಿಸಿದ್ದರೂ ಅವರ ಹೇಳಿಕೆಗಳಲ್ಲಿ ಯಾವುದೇ ಪರಿಗಣಿಸುವಂತಹ ಅಂಶಗಳು ಇಲ್ಲದ ಕಾರಣ ಹಾಗೂ ಪೂರಕ ದಾಖಲೆಗಳನ್ನು ಸಲ್ಲಿಸದ ಕಾರಣ ಅವರ ವಿರುದ್ಧ ಮಾಡಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ಕಂಡು ಹಿಡಿಯುವ ದೃಷ್ಟಿಯಿಂದ ಸದರಿ ಅಧಿಕಾರಿ/ನೌಕರರ ವಿರುದ್ದ ಜಂಟೀ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ, ಶ್ರೀ ಎನ್. ಶರಣಪ್ಪ, ನಿವೃತ್ತ ಕಂದಾಯ ನಿರೀಕ್ಷಕರು ಮತ್ತು ಶ್ರೀ ಎನ್.ಕೆ. ರಂಗಯ್ಯ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಇವರುಗಳು ಗಂಗಾವತಿಯಲ್ಲಿ ವಾಸವಾಗಿರುವ ಕಾರಣ, ಇವರುಗಳ ವಿರುದ್ದ ದಿನಾಂಕ 29–08–2006 ರ ನೋಟೀಸು ಸಂಖ್ಯೆ : ಸಿಆಸುಇ 056 ಎಸ್ಇಎನ್ 98 ಜಾರಿಯಾಗಿರುವುದಿಲ್ಲವೆಂದು ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರು ವರದಿ ಮಾಡಿರುತ್ತಾರೆ. ಅಲ್ಲದೇ ಶ್ರೀ ರಂಗಯ್ಯ, ಪ್ರಥಮ ದರ್ಜೆ ಸಹಾಯಕರು ಇವರು ದಿನಾಂಕ : 31–01–2003 ರಂದು ಹಾಗೂ ಶ್ರೀ ಶರಣಪ್ಪ, ಕಂದಾಯ ನಿರೀಕ್ಷಕರು ಇವರು ದಿನಾಂಕ : 31–01–2002 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ, ಈ ಅಧಿಕಾರಿ/ನೌಕರರ ವಿರುದ್ಧ ಪ್ರಾರಂಭಿಸಿದ ಇಲಾಖಾ ವಿಚಾರಣೆಯ ಪ್ರಕರಣವು 1981–82 ನೇ ಸಾಲಿಗೆ ಸಂಬಂಧಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮ 214ರ ಪ್ರಕಾರ ನಿವೃತ್ತ ನೌಕರರ ವಿರುದ್ಧ ವಿಚಾರಣೆಯನ್ನು ಪ್ರಕರಣ ನಡೆದ ನಾಲ್ಕು ವರ್ಷಗಳೊಳಗೆ ನಡೆಸಬೇಕಾಗಿರುವುದರಿಂದ, ಈ ಪ್ರಕರಣದಲ್ಲಿ ದೋಷಾರೋಪಣ ಪಟ್ಟಿಯನ್ನು ದಿನಾಂಕ : 29–08–2006 ರಂದು ಹೊರಡಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮ 214(2)(ಬಿ)(II) ರ ಪ್ರಕಾರ ಇವರಿಬ್ಬರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಅವಕಾಶ ಇಲ್ಲದಿರುವ ಹಿನ್ನಲೆಯಲ್ಲಿ ಸರ್ಕಾರವು ಇವರುಗಳನ್ನು ಜಂಟೀ ಇಲಾಖಾ ವಿಚಾರಣೆಯಿಂದ ಕೈಬಿಡಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 014 ಕೆಇವಿ 2007, ಬೆಂಗಳೂರು, ದಿನಾಂಕ : 11ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಶ್ರೀ ಎನ್. ಶರಣಪ್ಪ, ನಿವೃತ್ತ ಕಂದಾಯ ನಿರೀಕ್ಷಕರು ಮತ್ತು ಶ್ರೀ ಎನ್.ಕೆ. ರಂಗಯ್ಯ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ತಹಶೀಲ್ದಾರರ ಕಛೇರಿ, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ರವರುಗಳನ್ನು ದಿನಾಂಕ 21–03–2007 ರ ಸರ್ಕಾರಿ ಆದೇಶ ಸಂಖ್ಯೆ : ಸಿಅಸುಇ 056 ಎಸ್ಇಎನ್ 98 ರಲ್ಲಿ ಆದೇಶಿಸಿರುವ ಜಂಟಿ ಇಲಾಖಾ ವಿಚಾರಣೆಯಿಂದ ಕೈಬಿಡಲಾಗಿದೆ.

ಈ ವಿಚಾರಣೆಯು ಪ್ರಾರಂಭವಾಗದೇ ಇದ್ದಲ್ಲಿ, ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 154

**(ಹೆಚ್.ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2)

## PERSONNEL AND ADMINISTRATIVE REFORMS SECRETARIAT

**Sub :** Terms and conditions of Deputation of Sri. V. Srinivas, Deputy Secretary, CSS, Government of India, on Deputation as Private Secretary to Hon'ble Minister for Minor Irrigation, Planning and Statistics, Karnataka.

**Read :** Notification No. DPAR 555 SGO 2008, dated: 16-08-2008.

**Preamble :**

In Notification dated 16-08-2008 read above, Sri V. Srinivas, Deputy Secretary, CSS, Government of India was appointed on Deputation as Private Secretary to Hon'ble Minister for Minor Irrigation, Planning and Statistics. The officer reported for duty on 16-08-2008.

The question of prescribing the terms and conditions of Deputation of Sri. V. Srinivas, Deputy Secretary, CSS, Government of India, on Deputation as Private Secretary to Hon'ble Minister for Minor Irrigation, Planning and Statistics has been examined and hence the following order.

**Government Order No. DPAR 555 SGO 2008, Bangalore, Dated 11th January 2010**

The terms and conditions for Deputation of Sri. V. Srinivas, as Private Secretary to Hon'ble Minister for Minor Irrigation, Planning and Statistics from 16-08-2008 are indicated hereunder :-

**1) PERIOD OF DEPUTATION :**

The period of Deputation of Sri. V. Srinivas, Deputy Secretary, CSS, Government of India as Private Secretary to Hon'ble Minister for Minor Irrigation, Planning and Statistics from 16-08-2008 and until further orders or co-terminus with the office of the Minister for Minor Irrigation, Planning and Statistics or whichever is earlier.

**2) THE COMMENCEMENT AND TERMINATION OF DEPUTATION :**

The deputation will commence on the date on which he hands over charge of his post under parent department and ends on the date on which he assume charge of a post under parent department.

**3) PAY :**

During the period of deputation he shall receive pay and grade pay in the pay scale applicable to the post he hold in his parent department. He shall be entitled to the payment of deputation allowance as per Official Memorandum No. 2/29/91-Est.(Pay-II), Dated: 05-01-1994 of the Government of India, as amended from time to time. Subject to the condition that Pay and Foreign Allowance should not exceed the maximum of the scale of the pay of Deputy Secretary (Government of India).

**4) D.A./H.R.A./C.C.A. :**

The payment of D.A./H.R.A./C.C.A. shall be as provided under the Central Government Rules.

**5) JOINING TIME, PAY DURING JOINING TIME AND T.A. FOR JOURNEY ON TRANSFER :**

He will be entitled to T.A. and joining time both on joining the post on deputation and on reversion to the parent department under the rules of the State Government.

**6) TRAVELLING ALLOWANCE :**

For journeys undertaken after joining on deputation the Government employee shall be entitled to receive T.A. and D.A. as per the State rules under borrowing Government.

**7) LEAVE AND PENSION :**

During the period of deputation he will continue to be governed by the leave and pension rules of the Central Government.

**8) CENTRAL GOVERNMENT EMPLOYEE'S GROUP INSURANCE SCHEME :**

During the period of deputation he shall continue to subscribe to this scheme and the borrowing government shall credit recovery effected to the relevant head.

**9) P.F. CONTRIBUTIONS :**

During the period of deputation he shall continue to subscribe to the provident fund of his parent department to which he may be subscribing where he is placed on deputation in accordance with the rules of such fund.

**10) MEDICAL CONCESSION :**

The Official shall be entitled to the Medical attendance as per the Karnataka Government Servant (Medical Attendance) Rules 1963,

**11)** He shall perform his duties diligently and he shall maintain strict secrecy in respect of official information, which he comes to know in the course of his duties.

**12)** He shall be liable to reimburse to Government all the losses which the Government may sustain due to mis-conduct of any sort on his part.

This Order issues with the concurrence of Finance Department vide Note No. FD 1689 Services-1/2009, dated : 31-12-2009.

By Order and in the name of the Governor of Karnataka,
**(M.S SHIVARAM)**
Under Secretary to Government,
Department of Personnel and
Administrative Reforms (Services-3)

PR. 155

**ಸಹಕಾರ ಸಚಿವಾಲಯ**

**ವಿಷಯ :** ದಿನಾಂಕ: 31-03-2010ರೊಳಗೆ ನಡೆಸಬೇಕಾಗಿರುವ ಕರ್ನಾಟಕ ದೂರಸಂಪರ್ಕ ಇಲಾಖೆ ನೌಕರರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ದೂರಸಂಪರ್ಕ ಇಲಾಖೆ ನೌಕರರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಅಧ್ಯಕ್ಷರ ಪತ್ರ ಸಂಖ್ಯೆ : ಕೆಟಿಡಿಇಸಿಎಸ್/ಎಎಂಇ/2009-10, ದಿನಾಂಕ : 14-12-2010

**ಪ್ರಸ್ತಾವನೆ :**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(2)ರಡಿ ಕರ್ನಾಟಕ ದೂರಸಂಪರ್ಕ ಇಲಾಖೆ ನೌಕರರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದು ಮಾರ್ಚ್ 2010ರಲ್ಲಿ ತನ್ನ ಆಡಳಿತ ಸಮಿತಿಗೆ ಚುನಾವಣೆಯನ್ನು ನಡೆಸಬೇಕಾಗಿದ್ದು ಸದರಿ ಸಂಘದ ಅಧ್ಯಕ್ಷರು ಮೇಲೆ ಓದಲಾದ ಪತ್ರದಲ್ಲಿ ಸಂಘವು ಮೈಸೂರು ಮತ್ತು ಬೆಂಗಳೂರಿನಲ್ಲಿ ವಿವಿಧ ಬಡಾವಣೆಗಳನ್ನು ನಿರ್ಮಿಸುತ್ತಿದ್ದು, ಈ ಯೋಜನೆಗಳು ಬರುವ 08 ರಿಂದ 10 ತಿಂಗಳ ಅವಧಿಯಲ್ಲಿ ಸಂಪೂರ್ಣವಾಗಿ ಪೂರ್ಣಗೊಳಿಸಿ ನಿವೇಶನಗಳನ್ನು ಶೇವಣಿದಾರರಿಗೆ ಹಂಚಿಕೆ ಮಾಡಲು ಅನುವಾಗುವಂತೆ ಮಾರ್ಚಿ 2010 ರಲ್ಲಿ ನಡೆಯಬೇಕಿರುವ ಆಡಳಿತ ಸಮಿತಿಯ ಚುನಾವಣೆಯನ್ನು ಒಂದು ವರ್ಷ ಕಾಲ ಮುಂದೂಡಬೇಕೆಂದು ಕೋರಿದ್ದಾರೆ.

ಸದರಿ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 219 ಸಿಎಲ್‌ಎಂ 2009, ಬೆಂಗಳೂರು, ದಿನಾಂಕ: 08-01-2010**

ಮೇಲಿನ ಪರಿಸ್ಥಿತಿಯಲ್ಲಿ ದೂರಸಂಪರ್ಕ ಇಲಾಖೆ ನೌಕರರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29 ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಸದರಿ ಸಹಕಾರ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ : 30-09-2010ರೊಳಗೆ ನಡೆಸುವಂತೆ ಆದೇಶಿಸುತ್ತದೆ.

ಸೂಚನೆ : ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 30-09-2010 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರದ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟುಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್.171

**Information Technology, Biotechnology and Science and Technology Secretariat**

**Sub :** Proposal of IIITB Bangalore for financial Support for expansion of current campus in Bangalore.

**Read :** Letter dated : 1-10-2009 of the Director, IIITB Bangalore.

**Preamble:**

The Director, IIITB, Bangalore vide their letter dated : 1-10-2009 has submitted proposal for expansion of their current campus at electronics City at an estimated cost of Rs. 11.43 crores. Out of which, the Govt of India, Department of Information Technology has granted Rs. 5 crores under a project named "Training of trainers and Job Oriented Training" towards equipment like computers, network, classroom equipment, lifts and furniture and the balance of Rs. 6.5 crores towards construction has to be mobilized by them. Hence, has sought the financial support from the Government of Karnataka.

Since, Government had financially supported IIITB to acquire land and building in electronics City by providing a start up grant of Rs. 10 crores between 1999-2002, it is felt necessary to provide financial support of Rs. 6 crores over two years starting from 2009-10 for the expansion project to IIITB. Accordingly, it is considered to provide Rs. 300 lakhs for 2009-10. Hence, the orders.

**Government Order No. ITD 30 MDA 2009, Bangalore, Dated : 18th January 2010**

In the circumstance explained in the preamble, Government are pleased to accord approval for relelase of Rs. 300 lakhs (Rupees Three hundred lakhs only) to the Director, International Institute of Information Technology, Bangalore (IIITB) for expansion of their current campus at electronics City in Bangalore.

The expenditure on this account shall be met, out of the grants that would be provided in the supplementary estimate-II under the Head of Account **"3451-00-090-2-05-101(Plan)"** for the year 2009-10.

The Administrative Officer, Directorate of Information Technology & Bio Technology Department shall draw the said grant from the Treasury duly countersigned by the director, Information Technology & biotechnology and disburse the amount.

The Director, International Institute of Information Technology, Bangalore(IIITB) shall submit the Utilization certificate in the prescribed format through the Director, Information Technology and Biotechnology, Bangalore.

This order issues with the concurrence of Finance Department vide their Note in No. FD 304 Exp-2/09, dated 21-12-2009.

By Order and in the Name of the Governor of Karnataka
M.V. Krishnamurthy
Under Secretary to Government
Information Technology, Biotechnology
and Science and Technology Department.

P.R.172

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಗೆ ನ್ಯಾನೋ ಪಾರ್ಕ್ ಸ್ಥಾಪಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ವಿಯಇ 55 ವಿತ್ರಮ 2009, ದಿನಾಂಕ : 16–4–2009
2. ಸರ್ಕಾರಿ ಆದೇಶ ಸಂಖ್ಯೆ : ವಿಯಇ 139 ವಿತ್ರಮ 2007, ದಿನಾಂಕ : 12–09–2007
3. ಸರ್ಕಾರಿ ಆದೇಶ ಸಂಖ್ಯೆ : ವಿಯಇ 139 ವಿತ್ರಮ 2007, ದಿನಾಂಕ : 27–09–2007
4. ಸರ್ಕಾರಿ ಆದೇಶ ಸಂಖ್ಯೆ : ವಿಯಇ 11 ವಿತ್ರಮ 2009, ದಿನಾಂಕ : 27–01–2009
5. ಸರ್ಕಾರಿ ಆದೇಶ ಸಂಖ್ಯೆ : ವಿಯಇ 8 ವಿತ್ರಮ 2010, ದಿನಾಂಕ : 05–01–2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2009–10ನೇ ಸಾಲಿನಲ್ಲಿ ಮುಂದುವರೆಸಲು ಯೋಜನಾ ಲೆಕ್ಕ ಶೀರ್ಷಿಕೆ 3425–60–200–0–19(101)ರಡಿಯಲ್ಲಿ ನ್ಯಾನೋ ತಂತ್ರಜ್ಞಾನ ಸಮ್ಮೇಳನ–ನ್ಯಾನೋ ಪಾರ್ಕ್ ಸ್ಥಾಪನೆಗಾಗಿ ಒಟ್ಟು ರೂ. 200.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (2), (3), (4) ಹಾಗೂ (5) ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಬೆಂಗಳೂರಿನಲ್ಲಿ ನ್ಯಾನೋ ಪಾರ್ಕ್ ಸ್ಥಾಪಿಸಲು ಅವಶ್ಯವಿರುವ ಭೂಸ್ವಾಧೀನ ಹಾಗೂ ತಂತ್ರಜ್ಞಾನ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಅನುವಾಗುವಂತೆ ರೂ. 446.00 ಲಕ್ಷಗಳನ್ನು ಸದಸ್ಯ ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ ಇವರಿಗೆ ಈಗಾಗಲೇ ಬಿಡುಗಡೆ ಮಾಡಲಾಗಿದೆ.

2009-10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 3425ರಡಿ ನ್ಯಾನೋ ತಂತ್ರಜ್ಞಾನಕ್ಕೆ ಬೆಂಬಲಕ್ಕಾಗಿ ರೂ. 200.00 ಲಕ್ಷಗಳನ್ನು ಒದಗಿಸಲಾಗಿದೆ. ಅಂತೆಯೇ ಈ ಸಾಲಿನ ಮುಂದುವರೆದ ಯೋಜನೆಗಳ ಸರ್ಕಾರಿ ಆದೇಶದಲ್ಲಿ ಲೆಕ್ಕ ಶೀರ್ಷಿಕೆ 3425-60-200-0-19(101)ರಡಿ ನ್ಯಾನೋ ತಂತ್ರಜ್ಞಾನಕ್ಕಾಗಿ ರೂ. 200.00 ಲಕ್ಷಗಳನ್ನು ಕಲ್ಪಿಸಲಾಗಿದೆ. ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯ ವತಿಯಿಂದ ನ್ಯಾನೋ ಪಾರ್ಕ್ ಸ್ಥಾಪಿಸಲು ಭೂಸ್ವಾಧೀನ ಒಳಗೊಂಡಂತೆ ಅವಶ್ಯಕ ಕ್ರಮಗಳನ್ನು ಕೈಗೊಳ್ಳುವ ಸಲುವಾಗಿ ಅಕಾಡೆಮಿಗೆ ಈಗಾಗಲೇ ಬಿಡುಗಡೆ ಮಾಡಿರುವ ಮೊತ್ತಕ್ಕೆ ಪೂರಕವಾಗಿ ಎರಡನೇ ಹಂತದಲ್ಲಿ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 8 ವಿತ್ರಮ 2010, ಬೆಂಗಳೂರು, ದಿನಾಂಕ: 15ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ನ್ಯಾನೋ ತಂತ್ರಜ್ಞಾನದ ಬೆಳವಣಿಗೆಗೆ ಅನುವಾಗುವಂತೆ ಬೆಂಗಳೂರಿನಲ್ಲಿ ನ್ಯಾನೋ ಪಾರ್ಕ್ ಸ್ಥಾಪಿಸಲು ಅವಶ್ಯವಿರುವ ಭೂಸ್ವಾಧೀನ ಹಾಗೂ ಇತರ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನಗೊಳಿಸಲು ಅನುವಾಗುವಂತೆ 2009-10ನೇ ಸಾಲಿನಲ್ಲಿ ಎರಡನೇ ಹಂತವಾಗಿ ರೂ. 100.00 ಲಕ್ಷಗಳನ್ನು (ರೂಪಾಯಿ ಒಂದು ನೂರು ಲಕ್ಷಗಳು ಮಾತ್ರ) ಸದಸ್ಯ ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಬೆಂಗಳೂರು ಇವರಿಗೆ ಕೆಳಕಂಡ ನಿಭಂಧನೆ ಮತ್ತು ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲಾಗಿದೆ.

1) ಈ ಉದ್ದೇಶಿತ ಯೋಜನೆಯ ಖರ್ಚು ವೆಚ್ಚಗಳನ್ನು ಯೋಜನಾ **ಲೆಕ್ಕ ಶೀರ್ಷಿಕೆ 3425-60-200-0-19-(101) (ಯೋಜನೆ) ನ್ಯಾನೋ ತಂತ್ರಜ್ಞಾನ ಸಮ್ಮೇಳನ-ನ್ಯಾನೋ ಪಾರ್ಕ್** ಸ್ಥಾಪನೆಯ ಯೋಜನೆಗಳಿಗೆ ಸಹಾಯಾನುದಾನ ಇದರ ಅಡಿಯಲ್ಲಿ ಭರಿಸತಕ್ಕದ್ದು.
2) ಈ ಮೇಲಿನ ಅನುದಾನವನ್ನು ಖರ್ಚು ಮಾಡಿದ ಬಗ್ಗೆ ಸಂಸ್ಥೆಯು ಉಪಯೋಗತಾ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕಪತ್ರಗಳನ್ನು ಸಲ್ಲಿಸತಕ್ಕದ್ದು.
3) ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಉಪಯೋಗಿಸತಕ್ಕದ್ದು ಹಾಗೂ ಈ ಹಣವನ್ನು ಬೇರೆ ಯೋಜನೆಗೆ/ಕಾರ್ಯಕ್ರಮಗಳಿಗೆ ಸರ್ಕಾರದ ಅನುಮತಿ ಇಲ್ಲದೆ ವರ್ಗಾಯಿಸಬಾರದು.
4) ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಅನುದಾನವನ್ನು ಉಳಿಸಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದೇ ಇದ್ದದ್ದು ಕಂಡು ಬಂದಲ್ಲಿ ಸದರಿ ಮೊತ್ತಕ್ಕೆ ಬ್ಯಾಂಕ್ ನೀಡುವ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸಿಕೊಳ್ಳಲು ಕ್ರಮಕೈಗೊಳ್ಳಲಾಗುವುದು.
5) ಅನುದಾನವನ್ನು ಬಳಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು ಮತ್ತು ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಹಿಂತೆಗೆದುಕೊಳ್ಳಲು ಕ್ರಮ ತೆಗೆದುಕೊಳ್ಳಲಾಗುವುದು.
6) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 2008, ದಿನಾಂಕ : 16-05-2008ರಡಿ ಸರ್ಕಾರದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಪಿ.ಆರ್.173

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ರಾಯಭಾಗ ತಾಲ್ಲೂಕು, ಬೊಮ್ಮನಾಳ ಗ್ರಾಮದ ಸಮಗಾರ ತೋಟದ ಫಲಾನುಭವಿಗಳ ಜಮೀನುಗಳಿಗೆ ಏತ ನೀರಾವರಿ ಯೋಜನೆಗೆ ಪೈಪ್ ಲೈನ್ ಮೂಲಕ ನೀರೊದಗಿಸುವ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ದಿನಾಂಕ 03-11-09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ವಿಜಾಪುರ/ ಸ.ಇಂ-1/2009-10/6530.
2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26-12-09ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/08-09/4972.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ರಾಯಭಾಗ ತಾಲ್ಲೂಕು, ಬೊಮ್ಮನಾಳ ಗ್ರಾಮದ ಸಮಗಾರ ತೋಟದ ಫಲಾನುಭವಿಗಳ ಜಮೀನುಗಳಿಗೆ ಏತ ನೀರಾವರಿ ಯೋಜನೆಗೆ ಪೈಪ್ ಲೈನ್ ಮೂಲಕ ನೀರೊದಗಿಸುವ ಕಾಮಗಾರಿಯ 19.30 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ವಿಶೇಷ ಘಟಕ ಯೋಜನೆಯಡಿ ದಿನಾಂಕ 27-02-09ರಂದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಆಡಳಿತಾತ್ಮಕ ಅನುಮೋದನೆ ನೀಡಿದ್ದು ಅಧೀಕ್ಷಕ ಇಂಜಿನಿಯರ್, ಬೆಳಗಾವಿ ವೃತ್ತ ರವರ ಕಛೇರಿ ನೋಂದಣಿ ಸಂಖ್ಯೆ: 107/12-09ರಡಿ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾಂ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ: 08-06-2009 |
| 2 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿನಾಂಕ: 21-06-2009 |
| 3 | ಕರ್ನಾಟಕ ರಾಜ್ಯ ಪತ್ರ | ದಿನಾಂಕ: 25-06-2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 17 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ನ್ನು ದಿನಾಂಕ 11-08-09ರಂದು ತೆರೆಯಲಾಗಿದೆ. ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 17,06,736/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 17,06,938/- |

| ಕ್ರಮ ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
|---|---|---|---|---|
| 1 | ಎಸ್.ಪಿ. ಸಂಕಪಾಲ 1ನೇ ದರ್ಜೆ ಗುತ್ತಿಗೆದಾರರು | ರೂ. 19,61,677/- | 14.94 ಹೆಚ್ಚು | 14.92 ಹೆಚ್ಚು |
| 2 | ಆರ್.ಆರ್. ಪಿದಾಯಿ, 1ನೇ ದರ್ಜೆ ಗುತ್ತಿಗೆದಾರರು | ರೂ. 19,69,711/- | 15.41 ಹೆಚ್ಚು | 15.39 ಹೆಚ್ಚು |

ಮೇಲ್ಕಂಡ ಕ್ರ.ಸಂ. 1ರಲ್ಲಿರುವ ಶ್ರೀ ಎಸ್.ಪಿ. ಸಂಕಪಾಲ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 19,61,677-00ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತ

ರೂ. 17,06,938–00ಕ್ಕೆ ಹೋಲಿಸಿದಾಗ ಶೇ. 14.92 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 13–11–09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 17,06,938–00 ಗಳ ಮೇಲೆ ಶೇಕಡ 13.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 19,41,642–00 ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಪಿ. ಸಂಕಪಾಲ, 1ನೇ ದರ್ಜೆ ಗುತ್ತಿಗೆದಾರರು, ಬೆಳಗಾಂ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಸನೀಇ 39 ಏನೀಯೋ 2009, ಬೆಂಗಳೂರು, ದಿನಾಂಕ : 15ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ, ರಾಯಭಾಗ ತಾಲ್ಲೂಕು, ಬೊಮ್ಮನಾಳ ಗ್ರಾಮದ ಸಮಗಾರ ತೋಟದ ಫಲಾನುಭವಿಗಳ ಜಮೀನುಗಳಿಗೆ ಏತ ನೀರಾವರಿ ಯೋಜನೆಗೆ ಪೈಪ್ ಲೈನ್ ಮೂಲಕ ನಿರೋದಗಿಸುವ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 17,06,938–00ಗಳ ಮೇಲೆ ಶೇಕಡ 13.75 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 19,41,642–00ಗಳಿಗೆ (ಹತ್ತೊಂಭತ್ತು ಲಕ್ಷದ ನಲವತ್ತೊಂದು ಸಾವಿರದ ಆರುನೂರ ನಲವತ್ತೆರಡು ರೂ.ಗಳು ಮಾತ್ರ) ಶ್ರೀ ಎಸ್.ಪಿ. ಸಂಕಪಾಲ, 1ನೇ ದರ್ಜೆ ಗುತ್ತಿಗೆದಾರರು, ಬೆಳಗಾಂ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 174

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾರ್ಮಿಕ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಬಾಲಕಾರ್ಮಿಕ ಸಂಪನ್ಮೂಲ ಕೇಂದ್ರಕ್ಕೆ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಕಾರ್ಮಿಕ ಆಯುಕ್ತರು ಮತ್ತು ರಾಜ್ಯ ಸಂಪನ್ಮೂಲ ಅಧಿಕಾರಿ, ಕಾರ್ಮಿಕ ಭವನ, ಬೆಂಗಳೂರು ಇವರ ಪತ್ರ ಸಂಖ್ಯೆ : ಎಸ್‌ಆರ್‌ಸಿ/ಎಸ್‌ಎಪಿ/005/09–10 ದಿನಾಂಕ : 23–11–2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 23–11–2009ರ ಪತ್ರದಲ್ಲಿ ಕಾರ್ಮಿಕ ಆಯುಕ್ತರು ಹಾಗೂ ರಾಜ್ಯ ಸಂಪನ್ಮೂಲ ಅಧಿಕಾರಿ, ಬೆಂಗಳೂರು ಇವರು ಕರ್ನಾಟಕ ರಾಜ್ಯ ಬಾಲ ಕಾರ್ಮಿಕ ಸಂಪನ್ಮೂಲ ಕೇಂದ್ರಕ್ಕೆ ಸಲಹಾ ಸಮಿತಿಯನ್ನು ರಚಿಸುವಂತೆ ಹಾಗೂ ಇದೇ ಸಮಿತಿಯು ರಾಜ್ಯ ಬಾಲ ಕಾರ್ಮಿಕ ನಿರ್ಮೂಲನಾ ಕ್ರಿಯಾ ಯೋಜನೆಯನ್ನು ಸಹ ಪರಿಷ್ಕರಿಸುವ ಕಾರ್ಯವನ್ನು ನಿರ್ವಹಿಸಲಿರುವುದರಿಂದ ರಾಜ್ಯ ಬಾಲ ಕಾರ್ಮಿಕ ಸಂಪನ್ಮೂಲ ಕೇಂದ್ರಕ್ಕೆ ಸಲಹಾ ಸಮಿತಿಯನ್ನು ರಚಿಸಲು ಸೂಕ್ತ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಪ್ರಸ್ತಾವನೆಯಲ್ಲಿ ಕೋರಿರುತ್ತಾರೆ.

ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ರಾಜ್ಯ ಬಾಲ ಕಾರ್ಮಿಕ ಸಂಪನ್ಮೂಲ ಕೇಂದ್ರಕ್ಕೆ ಸಲಹಾ ಸಮಿತಿಯನ್ನು ರಚಿಸಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 90 ಸಿಎಲ್‌ಸಿ 2009, ಬೆಂಗಳೂರು, ದಿನಾಂಕ: 11ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯ ಬಾಲ ಕಾರ್ಮಿಕ ಸಂಪನ್ಮೂಲ ಕೇಂದ್ರಕ್ಕೆ ಈ ಕೆಳಗಿನಂತೆ ಸಲಹಾ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2. | ಕಾರ್ಮಿಕ ಆಯುಕ್ತರು, ಕಾರ್ಮಿಕ ಇಲಾಖೆ, ಕರ್ನಾಟಕ ಸರ್ಕಾರ | ಉಪಾಧ್ಯಕ್ಷರು |
| 3. | ಡೆಪ್ಯೂಟಿ ಕೋ–ಆರ್ಡಿನೇಟರ್, ರಾಜ್ಯ ಬಾಲ ಕಾರ್ಮಿಕ ಸಂಪನ್ಮೂಲ ಕೇಂದ್ರ | ಸಮಾವೇಶಕ |
| 4. | ಪೋಲೀಸ್ ಮಹಾ ನಿರ್ದೇಶಕರು ಅಥವಾ ಅವರ ನಾಮನಿರ್ದೇಶಿತ, ಕರ್ನಾಟಕ ಸರ್ಕಾರ | ಸದಸ್ಯರು |
| 5. | ನ್ಯಾಷನಲ್ ಪ್ರಾಜೆಕ್ಟ್ ಕೋ–ಆರ್ಡಿನೇಟರ್, ಐ.ಎಲ್.ಓ–ಐಪಿಇಸಿ–ಕೆಸಿಎಲ್‌ಪಿ, ಬೆಂಗಳೂರು. ಕರ್ನಾಟಕ ಸರ್ಕಾರ | ಸದಸ್ಯರು |
| 6. | ನಿರ್ದೇಶಕರು, ಎನ್.ಆರ್.ಇ.ಜಿ.ಎ. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ. ಕರ್ನಾಟಕ ಸರ್ಕಾರ. | ಸದಸ್ಯರು |
| 7. | ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. ಕರ್ನಾಟಕ ಸರ್ಕಾರ. | ಸದಸ್ಯರು |
| 8. | ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಕರ್ನಾಟಕ ಸರ್ಕಾರ. | ಸದಸ್ಯರು |
| 9. | ಆಯುಕ್ತರು, ಕೃಷಿ ಇಲಾಖೆ, ಬೆಂಗಳೂರು ಕರ್ನಾಟಕ ಸರ್ಕಾರ. | ಸದಸ್ಯರು |
| 10. | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ. | ಸದಸ್ಯರು |
| 11. | ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ. | ಸದಸ್ಯರು |
| 12. | ಜಂಟಿ ಕಾರ್ಮಿಕ ಆಯುಕ್ತರು (ಕ.ವೇ/ಬಾ.ಕಾ), ಕಾರ್ಮಿಕ ಇಲಾಖೆ. ಕರ್ನಾಟಕ ಸರ್ಕಾರ. | ಸದಸ್ಯರು |
| 13. | ಯೂನಿಸೆಫ್ ಪ್ರತಿನಿಧಿ | ಸದಸ್ಯರು |
| 14. | ಅಜೀಮ್ ಪ್ರೇಮ್‌ಜೀ ಫೌಂಡೇಷನ್ ಪ್ರತಿನಿಧಿ. | ಸದಸ್ಯರು |
| 15. | ಮೆ: ವಿಶ್ವೇಶ್ವರ ಭಟ್, ಸಂಪಾದಕರು, ವಿಜಯ ಕರ್ನಾಟಕ ದಿನಪತ್ರಿಕೆ ಬೆಂಗಳೂರು. | ಸದಸ್ಯರು |
| 16. | ಮೆ: ಈಶ್ವರ ದೈತೋಟ, ಸಂಪಾದಕರು, ಟೈಮ್ಸ್ ಆಫ್ ಇಂಡಿಯಾ, ಕನ್ನಡ ದಿನಪತ್ರಿಕೆ, ಬೆಂಗಳೂರು. | ಸದಸ್ಯರು |
| 17. | ಮೇ: ರಾಘವೇಂದ್ರಭಟ್, ಪ್ರಾಜೆಕ್ಟ್ ಕೋ–ಆರ್ಡಿನೇಟರ್, ಚೈಲ್ಡ್ ಪ್ರೋಟೇಕ್ಷನ್ ಪ್ರಾಜೆಕ್ಟ್, ಯೂನಿಸೆಫ್, ರಾಯಚೂರು. | ಸದಸ್ಯರು |
| 18. | ಮೆ: ವಾಸುದೇವ್ ಶರ್ಮ, ಸದಸ್ಯರು, ರಾಜ್ಯ ಮಕ್ಕಳ ರಕ್ಷಣಾ ಸಮಿತಿ, ಕರ್ನಾಟಕ ಸರ್ಕಾರ | ಸದಸ್ಯರು |
| 19. | ಮೆ: ಪ್ರಮೋದ್ ಕುಲಕರ್ಣಿ, ಸಾತಿ ಸ್ವಯಂ ಸೇವಾ ಸಂಸ್ಥೆ, ಧಾರವಾಡ ಮತ್ತು ಬೆಂಗಳೂರು | ಸದಸ್ಯರು |
| 20. | ಮೆ: ಆರ್. ಕೃಷ್ಣನ್, ಯೋಜನಾ ನಿರ್ದೇಶಕರು, ರಾಷ್ಟ್ರೀಯ ಬಾಲ ಕಾರ್ಮಿಕ ಯೋಜನಾ ಸಂಘ, ಚಾಮರಾಜನಗರ ಮತ್ತು ಸ್ನೇಹ ಸ್ವಯಂ ಸೇವಾ ಸಂಸ್ಥೆ, ಚಾಮರಾಜನಗರ. | ಸದಸ್ಯರು |
| 21. | ಮೆ: ಡಾ: ನಿರಂಜನ ಆರಾಧ್ಯ, ಹಿರಿಯ ಸಂಶೋಧನ ಅಧಿಕಾರಿ, ಕಾನೂನು ಮತ್ತು ಬಾಲ ಕೇಂದ್ರ, ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿ, ನಾಗರಬಾವಿ, ಬೆಂಗಳೂರು–560 072 | ಸದಸ್ಯರು |
| 22. | ಪ್ರೋ. ಮಹದೇಶ್ವರನ್, ಐಸಾಕ್, ನಾಗರಬಾವಿ, ಬೆಂಗಳೂರು–560 072 | ಸದಸ್ಯರು |
| 23. | ಅಧ್ಯಕ್ಷರು, ಕರ್ನಾಟಕ ನೌಕರರ ಸಂಘ. | ಸದಸ್ಯರು |

| | | |
|---|---|---|
| 24. | ಅಧ್ಯಕ್ಷರು, ಹಿಂದ್ ಮಂಜ್ದೂರ್ ಸಭಾ, ಬೆಂಗಳೂರು. | ಸದಸ್ಯರು |
| 25. | ಅಧ್ಯಕ್ಷರು, ಐ.ಎನ್.ಟಿ.ಯು.ಸಿ. ಬೆಂಗಳೂರು. | ಸದಸ್ಯರು |
| 26. | ಎಂ.ಡಿ. ನರಸಿಂಹನ್, ಅಧ್ಯಕ್ಷರು, ಎ.ಐ.ಸಿ.ಟಿ.ಯು ಮತ್ತು ಸೀನಿಯರ್ ಕೌನ್ಸಿಲ್, ಹೈಕೋರ್ಟ್, ಬೆಂಗಳೂರು. | ಸದಸ್ಯರು |

ಈ ಆದೇಶವನ್ನು ತಕ್ಷಣದಿಂದಲೇ ಜಾರಿ ಬರುವಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಇಬ್ರಾಹಿಂ ಗೂನಡ್ಕ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

ಪಿ.ಆರ್.175

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂ.ಕಂಇ/132/ಎಂವಿಎಸ್ 2009 ಬೆಂಗಳೂರು, ದಿನಾಂಕ : 11ನೇ ಜನವರಿ 2010**

ಸರ್ಕಾರದ ಸಂ. ತಿದ್ದುಪಡಿ ಆದೇಶದಲ್ಲಿ ಈ ವೆಚ್ಚವನ್ನು ಲೆಕ್ಕಶೀರ್ಷಿಕೆ **"2027-01-200-01-06 ರಡಿಯಲ್ಲಿ ಭರಿಸತಕ್ಕದ್ದು"** ಎಂಬುದರ ಬದಲಾಗಿ **"ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2071-01-200-0-06 ರಡಿಯಲ್ಲಿ ಭರಿಸತಕ್ಕದ್ದು:"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-ಎ)

ಪಿ.ಆರ್.176

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1) ಆದೇಶ ಸಂ. ಮೂಅಇ 24 ರಾಅವಿ 2000, ದಿನಾಂಕ 02-01-2003
2) ಆದೇಶ ಸಂ. ಮೂಅಇ 24 ರಾಅವಿ 2000, ದಿನಾಂಕ 30-06-2004
3) ಆದೇಶ ಸಂ. ಮೂಅಇ 24 ರಾಅವಿ 2000, ದಿನಾಂಕ 18-08-2007
4) ಆದೇಶ ಸಂ. ಮೂಅಇ 14 ರಾಅವಿ 2007, ದಿನಾಂಕ 15-11-20007
5) ಆದೇಶ ಸಂ. ಮೂಅಇ 14 ರಾಅವಿ 2008, ದಿನಾಂಕ 20-06-2008
6) ಆದೇಶ ಸಂ. ಮೂಅಇ 14 ರಾಅವಿ 2008, ದಿನಾಂಕ 06-09-2008
7) ಗುಲ್ಬರ್ಗಾ ಜಿಲ್ಲಾಧಿಕಾರಿ ಕಛೇರಿ ಪತ್ರ ಸಂ.ಕಂ. ಭೂಸ್ವಾ : 429/08-09, ದಿನಾಂಕ 31-12-2009

**ಪ್ರಸ್ತಾವನೆ :**

ಗುಲ್ಬರ್ಗಾ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಶ್ರೀನಿವಾಸ ಸಾರಡಗಿ ಗ್ರಾಮದಲ್ಲಿ 567 ಎಕರೆ ಭೂ ಪ್ರದೇಶವನ್ನು ಸ್ವಾಧೀನಪಡಿಸಿಕೊಳ್ಳಲು ಅನುಮೋದನೆ ನೀಡಲಾಗಿದೆ.

2. ಭೂಸ್ವಾಧೀನಕ್ಕಾಗಿ ಅಗತ್ಯವಾದ ಮೊತ್ತ ರೂ. 2.50 ಕೋಟಿಗಳನ್ನು ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಿ, ಈ ಮೊತ್ತವನ್ನು 2 ಕಂತುಗಳಲ್ಲಿ ಪಡೆಯುವಂತೆ ಸೂಚಿಸಲಾಗಿರುತ್ತದೆ.

3. ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ವಿಮಾನ ನಿಲ್ದಾಣವನ್ನು ಪಿ.ಪಿ.ಪಿ (ಬಿಓಟಿ) ಆಧಾರದ ಮೇಲೆ ಅಭಿವೃದ್ಧಿಪಡಿಸಲು ಹಾಗೂ ಕಾರ್ಯಾಚರಣೆಗೊಳಿಸುವ ಹೊಣೆಯನ್ನು ಮೆ: ಮೈಥಾಸ್ ಇನ್ಫ್ರಾ ಲಿಮಿಟೆಡ್,

ಎನ್‌ಸಿಸಿ ಇನ್ಫ್ರಾಸ್ಟ್ರಕ್ಚರ್ ಹೋಲ್ಡಿಂಗ್ಸ್ ಲಿಮಿಟೆಡ್ ಹಾಗೂ ವಿ.ಐ.ಇ. ಇಂಡಿಯಾ ಪ್ರಾಜೆಕ್ಟ್ ಡೆವಲಪ್‌ಮೆಂಟ್ ಅಂಡ್ ಹೋಲ್ಡಿಂಗ್ ಎಲ್.ಎಲ್.ಸಿ. ಇವರಿಗೆ ಕೆಲವು ಷರತ್ತು ಮತ್ತು ನಿಬಂಧನೆಗಳೊಡನೆ ನೀಡಲಾಗಿರುತ್ತದೆ.

4. ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ 125 ಎಕರೆ ಭೂಸ್ವಾಧೀನ ಹಾಗೂ ತಾಂಡಾಗಳ ಪುನರ್ವಸತಿಗಾಗಿ ರೂ. 1.00 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿದೆ.

5. ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ವಿಮಾನ ನಿಲ್ದಾಣದ ಅಭಿವೃದ್ಧಿ ಕುರಿತಂತೆ ಭೂಸ್ವಾಧೀನ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ಭೂ ಮಾಲೀಕರಿಗೆ ಪರಿಹಾರ ಧನ ಪಾವತಿಸಲು ಹಾಗೂ ವಿಮಾನ ನಿಲ್ದಾಣದ ವ್ಯಾಪ್ತಿಯಲ್ಲಿರುವ ಮಾಡ್ಯಾಳ ತಾಂಡಾ ಸ್ಥಳಾಂತರಿಸಲು ರೂ. 6,88,15,500–00 ಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿದೆ.

6. ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ವಿಮಾನ ನಿಲ್ದಾಣದಲ್ಲಿ ಬರುವ ಮಾಡಿಯಾಳ ತಾಂಡಾ ಪುನರ್ವಸತಿಗಾಗಿ ರೂ. 3,13,69,000–00 ಗಳನ್ನು ಬಿಡುಗಡೆ ಮಾಡಿದೆ.

7. ಮೇಲೆ ಓದಲಾದ ಕ್ರಮ ಸಂ. (7) ರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲಾಧಿಕಾರಿಗಳ ವಿಮಾನ ನಿಲ್ದಾಣಕ್ಕಾಗಿ ಸ್ವಾಧೀನ ಪಡಿಸಿಕೊಂಡ 795.30 ಎಕರೆ ಮತ್ತು ತಾಂಡಾದ ಪುನರ್ವಸತಿಗಾಗಿ 26.26 ಎಕರೆ ಒಟ್ಟು 822.16 ಎಕರೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲಾಗಿದ್ದು, ಪರಿಷ್ಕೃತ ಲೆಕ್ಕಾಚಾರದಂತೆ ಮಾಡಿಯಾಳ ತಾಂಡಾದ ಮನೆಗಳ ಮಾಲೀಕರಿಗೆ ಪರಿಹಾರ ಧನವನ್ನು ಪಾವತಿಸಲು ಹಾಗೂ ಸ್ವಾಧೀನಪಡಿಸಿಕೊಂಡ ಜಮೀನಿನಲ್ಲಿರುವ 209 ಕುಟುಂಬಗಳನ್ನು ಸ್ಥಳಾಂತರಗೊಳಿಸಲು ತಾತ್ಕಾಲಿಕ ಷೆಡ್ ನಿರ್ಮಾಣಕ್ಕಾಗಿ ಪ್ರತಿ ಷೆಡ್‌ಗೆ ರೂ. 20,000/– ದಂತೆ ಒಟ್ಟು 41.80 ಲಕ್ಷ ಹೆಚ್ಚುವರಿ ಅನುದಾನ ಅವಶ್ಯವಿರುತ್ತದೆಂದು ತಿಳಿಸಿ ವಿಮಾನ ನಿಲ್ದಾಣದ ಅಭಿವೃದ್ಧಿ ಕಾಮಗಾರಿಗಾಗಿ ಲಭ್ಯವಿರುವ ಮೊತ್ತವನ್ನು ಹೊರತುಪಡಿಸಿ ಈ ಕೆಳಗಿನಂತೆ ಅನುದಾನವನ್ನು ಬಿಡುಗಡೆ ಮಾಡಲು ಕೋರಿದ್ದಾರೆ.

| | |
|---|---|
| ಅ) ಮನೆಗಳ ಪರಿಹಾರ ಪಾವತಿಗಾಗಿ | – ರೂ.121.40 ಲಕ್ಷ |
| ಆ) ತಾತ್ಕಾಲಿಕ ಷೆಡ್‌ಗಳ ನಿರ್ಮಾಣಕ್ಕಾಗಿ ಅವಶ್ಯವಿರುವ ಅನುದಾನ | – ರೂ.41.80 ಲಕ್ಷ |
| | ಒಟ್ಟು–ರೂ.163.20 ಲಕ್ಷ |

8. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 72 ರಾಅವಿ 2008, ಬೆಂಗಳೂರು, ದಿನಾಂಕ 18ನೇ ಜನವರಿ 2010**

ಜಿಲ್ಲಾಧಿಕಾರಿ, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ, ಇವರ ಪ್ರಸ್ತಾವನೆಯಂತೆ ತಾಂಡಾದ ಮನೆಗಳ ಮಾಲೀಕರಿಗೆ ಪಾವತಿಸಬೇಕಾದ ಪರಿಷ್ಕೃತ ಪರಿಹಾರ ಮತ್ತು ತಾತ್ಕಾಲಿಕ ಷೆಡ್‌ಗಳ ನಿರ್ಮಾಣಕ್ಕಾಗಿ ಅವಶ್ಯವಿರುವ ಒಟ್ಟು ರೂ. 163.20 ಲಕ್ಷಗಳನ್ನು (ಒಂದು ಕೋಟಿ ಅರವತ್ತ ಮೂರು ಲಕ್ಷದ ಇಪ್ಪತ್ತು ಸಾವಿರಗಳು ಮಾತ್ರ) ಮಾತ್ರ ಬಿಡುಗಡೆ ಮಾಡಲು ಮಂಜೂರಾತಿಯನ್ನು ನೀಡಿದೆ.

2. ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 5465–01–190–1–05–133– ಯೋಜನೆ– ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಗಾಗಿ ಒದಗಣೆ ಮಾಡಿರುವ ರೂ. 60.00 ಕೋಟಿಗಳ ಆಯವ್ಯಯದಿಂದ ಭರಿಸತಕ್ಕದ್ದು.

3. ಸದರಿ ಮೊತ್ತವನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಇವರು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯಲು ಅನುಮತಿಸಿದೆ.

4. ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿ.ಎಫ್‌ಪಿ 2008 ದಿನಾಂಕ 16–05–2008 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಪ್ರತ್ಯಾ ಯೋಜನೆಯ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
(ಎನ್. ಮಂಜುಳಗೀತ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

ಪಿಆರ್–177

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ರಾಮನಗರ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 37ರ ರಸ್ತೆ ಕೆಳಸೇತುವೆ ನಿರ್ಮಾಣದ ಬದಲಿಗೆ ಕೂಡು (ತಿರುವು) ರಸ್ತೆಯನ್ನು ನಿರ್ಮಿಸಲು ಅನುಮೋದನೆ ನೀಡಿ ಹಣ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ ಮೂಅಇ 56 ರಾರಾಹೆ 2007, ದಿನಾಂಕ 22-12-2008
2) ದಿನಾಂಕ 21-11-2001 ಸಂಖ್ಯೆ ಸಿಇ/ಸಿಎನ್/ಬಿಎನ್‌ಸಿ/11-2001 ರ ರೈಲ್ವೆ ಇಲಾಖೆಯ ಪತ್ರ
3) ದಿನಾಂಕ 23-06-2009 ಸಂಖ್ಯೆ ಸಿಬಿಎಸ್/ಬಿಆರ್‌ಎಮ್/419/ಆರ್‌ಯುಬಿ/ರಾಮನಗರ/ 2009-10 ಮುಖ್ಯ ಇಂಜಿನಿಯರ್ ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡ,(ದ) ಬೆಂಗಳೂರು ಇವರ ಪತ್ರ.
4) ದಿನಾಂಕ 30-11-2009 ಸಂಖ್ಯೆ: ಡಬ್ಲ್ಯೂ/573/ಡಿಎಲ್/ಬಿಎನ್‌ಸಿ/ಆರ್‌ಎಮ್‌ಜಿಎಮ್-ಎಮ್ ವೈಎಸ್ ರ ಮುಖ್ಯ ಇಂಜಿನಿಯರ್ ನೈರುತ್ಯ ರೈಲ್ವೆ ವಲಯ, ಬೆಂಗಳೂರು ಇವರ ಪತ್ರ.

**ಪ್ರಸ್ತಾವನೆ :**

ರಾಮನಗರ ರೈಲ್ವೆ ನಿಲ್ದಾಣದ ಬಳಿಯಿರುವ ಎಲ್.ಸಿ.ಸಂ. 36-37ರ ಬದಲಿಗೆ ರಸ್ತೆ ಕೆಳಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಯನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರ ಶೇ 50:50 ವೆಚ್ಚವನ್ನು ಭರಿಸುವ ಆಧಾರದ ಮೇಲೆ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಎಲ್.ಸಿ. ಸಂಖ್ಯೆ 37 ರ ಬದಲಾಗಿ ರಸ್ತೆ ಕೆಳಸೇತುವೆ ನಿರ್ಮಾಣ ಮಾಡುವ ಕಾಮಗಾರಿಗೆ ರೂ. 4,73,02,157/-ಗಳ ಅಂದಾಜಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರ ಶೇ 50:50 ರಷ್ಟು ವೆಚ್ಚವನ್ನು ಭರಿಸುವ ಷರತ್ತಿನೊಂದಿಗೆ ಅನುಮೋದನೆ ನೀಡಲಾಗಿತ್ತು.

ಎಲ್.ಸಿ. ಸಂಖ್ಯೆ 37 ರಲ್ಲಿ ರಸ್ತೆ ಕೆಳಸೇತುವೆಯನ್ನು ನಿರ್ಮಿಸುವುದು ಸೂಕ್ತವಲ್ಲವೆಂದು ಹಾಗೂ ಅದಕ್ಕೆ ಬೇಕಾಗುವ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ಅವಶ್ಯಕತೆಯಿಲ್ಲ ಮತ್ತು ರಸ್ತೆ ಕೆಳಸೇತುವೆಯ ಬದಲಾಗಿ ತಿರುವು ರಸ್ತೆಯನ್ನು ನಿರ್ಮಿಸಬೇಕೆಂದು ರೈಲ್ವೆ ಇಲಾಖೆಯು ಕೋರಿದ್ದು, ರೈಲ್ವೆ ಇಲಾಖೆಯ ಕೋರಿಕೆಯನುಸಾರ ಸದರಿ ಕಾಮಗಾರಿಗೆ ಪರಿಷ್ಕೃತವಾಗಿ ತಯಾರಿಸಿರುವ ರೂ. 415.00ಲಕ್ಷ ಅಂದಾಜಿಗೆ ಅನುಮೋದನೆ ನೀಡಿ ರಾಜ್ಯ ಸರ್ಕಾರದ ಪಾಲಿನ ಮೊತ್ತವನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ (2) ರ ಪತ್ರದಲ್ಲಿ ಲೋಕೋಪಯೋಗಿ ಇಲಾಖೆಯ (ದ) ಮುಖ್ಯ ಇಂಜಿನಿಯರ್‌ರವರು ಕೋರಿದ್ದಾರೆ.

ಸದರಿ ಕಾಮಗಾರಿಗೆ ರೂ. 4,73,02,157/- ಗಳಿಗೆ 2001 ರಲ್ಲಿಯೇ ಅನುಮೋದನೆಯನ್ನು ನೀಡಲಾಗಿದ್ದು ಈಗಿನ ಅಂದಾಜಿನ ಪ್ರಕಾರ ಕಾಮಗಾರಿಯ ಮೊತ್ತವು ಹೆಚ್ಚಳವಾಗಬಹುದು. ಲೋಕೋಪಯೋಗಿ ಇಲಾಖೆಯು ತಯಾರಿಸಿರುವ ಅಂದಾಜಿನ ಮೊತ್ತದಲ್ಲಿ ರೈಲ್ವೆ ಇಲಾಖೆಯು ನಿಯಮಾನುಸಾರ ಶೇ 50 ರಷ್ಟು ಮೊತ್ತವನ್ನು ಭರಿಸಲು ಒಪ್ಪಿಗೆಯನ್ನು ನೀಡುತ್ತಾ ರಾಜ್ಯ ಸರ್ಕಾರದ ಪಾಲಿನ ಶೇ 50 ರಷ್ಟು ಮೊತ್ತವನ್ನು ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ (4)ರ ಪತ್ರದಲ್ಲಿ ನೈರುತ್ಯ ರೈಲ್ವೆ ವಲಯದ ಮುಖ್ಯ ಇಂಜಿನಿಯರ್‌ರವರು (ನಿರ್ಮಾಣ) ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 43 ರಾರಾಹೆ 2009, ಬೆಂಗಳೂರು, ದಿನಾಂಕ 16ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಮನಗರ ರೈಲ್ವೆ ನಿಲ್ದಾಣದ ಬಳಿ ಇರುವ ಎಲ್.ಸಿ. ಸಂ. 37 ರಲ್ಲಿ ರಸ್ತೆ ಕೆಳಸೇತುವೆಯನ್ನು ನಿರ್ಮಿಸುವ ಬದಲಾಗಿ ಸೇತುವೆಗೆ ಕೂಡು ರಸ್ತೆ (ತಿರುವು ರಸ್ತೆ) ನಿರ್ಮಿಸುವ ಕಾಮಗಾರಿಗೆ ಪರಿಷ್ಕೃತವಾಗಿ ತಯಾರಿಸಿರುವ ಅಂದಾಜು ರೂ. 415.00 ಲಕ್ಷಗಳ ಮೊತ್ತಕ್ಕೆ ರಾಜ್ಯ ಸರ್ಕಾರ ಹಾಗು ಕೇಂದ್ರ ಸರ್ಕಾರ ಶೇ 50:50 ರಷ್ಟು ಮೊತ್ತವನ್ನು ಭರಿಸುವ ಷರತ್ತಿಗೊಳಪಟ್ಟು ಅನುಮೋದನೆಯನ್ನು ನೀಡುತ್ತಾ, ರಾಜ್ಯ ಸರ್ಕಾರದ ಪಾಲಿನ 50 ರಷ್ಟು ಮೊತ್ತ ರೂ 207.5 ಲಕ್ಷಗಳನ್ನು (ಇನ್ನೂರ ಏಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು) 2009-10ನೇ ಸಾಲಿನ ಆಯವ್ಯಯದಲ್ಲಿ ರಸ್ತೆ ಕೆಳಸೇತುವೆ/ಮೇಲು ಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ 30.00 ಕೋಟಿಗಳಿಂದ ಲೆಕ್ಕ ಶೀರ್ಷಿಕೆ "5465-01-190-3-04 (ಯೋಜನೆ)-211 ಬಂಡವಾಳ" ಇದರ ಅಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

2. ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ರಾಮನಗರ ವಿಭಾಗ ಇವರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಪೇಯಿಸ್ ರಸೀತಿಯ ಮೂಲಕ ಡ್ರಾಮಾಡಿ ಕೂಡು ರಸ್ತೆ (ತಿರುವು ರಸ್ತೆ) ನಿರ್ಮಾಣದ ವೆಚ್ಚ ಭರಿಸತಕ್ಕದ್ದು.

3. ಈ ಆದೇಶವನ್ನು ದಿನಾಂಕ 16–5–2008 ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008 ಸರ್ಕಾರಿ ಆದೇಶದಲ್ಲಿ ಇಲಾಖೆ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
(ಆರ್. ಶಿವಲಿಂಗಯ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿಆರ್–178

## ನಗರಾಭಿವೃದ್ಧಿ ಸಚಿವಾಲಯ
### ಆದೇಶ

ಆದೇಶ ಸಂಖ್ಯೆ : ನಅಇ 186 ಮೈಅಪ್ರಾ 2006, ಬೆಂಗಳೂರು, ದಿನಾಂಕ 2ನೇ ಜನವರಿ 2010

ಸರ್ಕಾರವು ಮಂಗಳೂರು ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ 2001 (ಪರಿಷ್ಕೃತ–II) ಕ್ಕೆ ಅಂತಿಮ ಅನುಮೋದನೆ ನೀಡಿ ಹೊರಡಿಸಲಾದ ಆದೇಶ ಸಂಖ್ಯೆ: ನಅಇ 186 ಮೈಅಪ್ರಾ 2009 ದಿನಾಂಕ 10–09–2009 ಕ್ಕೆ ಸಂಬಂಧಿಸಿದಂತೆ ಸದರಿ ಆದೇಶದಲ್ಲಿನ ಕೆಲವೊಂದು ನ್ಯೂನ್ಯತೆಗಳನ್ನು ಸರಿಪಡಿಸಲು ಹೊರಡಿಸಲಾದ ತಿದ್ದುಪಡಿ ಸಂಖ್ಯೆ :

ನಅಇ 186 ಮೈಅಪ್ರಾ 2009 ದಿನಾಂಕ 3–10–2009 ರಲ್ಲಿನ ಕ್ರಮ ಸಂಖ್ಯೆ (7) ರಲ್ಲಿ "ಮಂಗಳೂರು ಮಹಾ ಯೋಜನೆ (ಪರಿಷ್ಕೃತ–II)ಯ ವಲಯ ನಿಯಮಾವಳಿಗಳಲ್ಲಿನ ಅಂಶ 28.4.1 ರಲ್ಲಿ ಅಕ್ರಮ ನಿವೇಶನಗಳನ್ನು ಸಕ್ರಮಗೊಳಿಸಲು ಪ್ರಸ್ತಾಪಿಸಿರುವುದು ಮೂಲ ಕಾಯ್ದೆಗೆ ವಿರುದ್ಧವಾಗಿರುತ್ತದೆ. ಈ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಹಾಗೂ ಇತರೆ ಕಾಯ್ದೆಗಳಿಗೆ ತಿದ್ದುಪಡಿ ತರುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. ಆದ್ದರಿಂದ ಅಂಶ 28.4.1 ನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಗೊಳಿಸಿದೆ" ಎಂದು ಆದೇಶಿಸಿರುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
(ಸಿ.ಟಿ. ನಾರಾಯಣಸ್ವಾಮಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

ಪಿಆರ್–179

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಖಾನಾಪುರ ತಾಲ್ಲೂಕು, ಪಾರಿಶ್ವಾಡ–ದೇವಲತ್ತಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009(1), ದಿನಾಂಕ 26–02–2009
2) ದಿನಾಂಕ 03–11–2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ವಿಜಾಪುರ/ಸ. ಇಂ–1/2009–10/6528.
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26–12–09ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/08–09/4972

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ಖಾನಾಪುರ ತಾಲ್ಲೂಕು, ಪಾರಿಶ್ವಾಡ – ದೇವಲತ್ತಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 50.00 ಲಕ್ಷ ರೂ. ಗಳ ಅಂದಾಜು ಪಟ್ಟಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ 26/02/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾಂ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ: 17–08–2009 |
| 2 | ಕರ್ನಾಟಕ ರಾಜ್ಯ ಪತ್ರ | ದಿನಾಂಕ: 20–08–2009 |
| 3 | ಸಂಯುಕ್ತ ಕರ್ನಾಟಕ ಮತ್ತು ಕನ್ನಡ ಪ್ರಭ ದಿನಪತ್ರಿಕೆಗಳು | ದಿನಾಂಕ: 23–08–2009 |
| 4 | ವಿಜಯ ಕರ್ನಾಟಕ ದಿನಪತ್ರಿಕೆ | ದಿನಾಂಕ: 25–08–2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದು 6 ಜನ ಗುತ್ತಿಗೆದಾರರ ಪೈಕಿ 3 ಜನ ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ನ್ನು ದಿನಾಂಕ 19-09-09 ರಂದು ತೆರೆಯಲಾಗಿದ್ದು, ಅದರಲ್ಲಿ ಈ ಕೆಳಕಂಡ ಒಬ್ಬರು ಗುತ್ತಿಗೆದಾರರ ಟೆಂಡರ್ ಮಾತ್ರ ಅರ್ಹವಾಗಿದ್ದು, ವಿವರಗಳು ಕೆಳಕಂಡಂತಿವೆ :

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 47,38,684/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 47,12,924/– |

| ಕ್ರ ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
|---|---|---|---|---|
| 1 | ಎ.ಎಸ್. ಸವಸುದ್ದಿ, 1ನೇ ದರ್ಜೆಯ ಗುತ್ತಿಗೆದಾರರು | ರೂ. 53.83,097/– | 13.60 ಹೆಚ್ಚು | 14.22 ಹೆಚ್ಚು |

ಮೇಲ್ಕಂಡಂತೆ ಶ್ರೀ ಎ.ಎಸ್. ಸವಸುದ್ದಿ, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿರುತ್ತಾರೆ ಇವರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 53,83,097–00 ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತ ರೂ. 47,12,924–00 ಕ್ಕೆ ಹೋಲಿಸಿದಾಗ ಶೇ 14.22 ರಷ್ಟು ಹೆಚ್ಚಾಗಿರುತದೆ. ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–11–09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 47,12,924–00 ಗಳ ಮೇಲೆ ಶೇಕಡ 12.95 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 53,23,248–00 ಗಳಿಗೆ ಕಾಮಗಾರಿಯನ್ನು ಶ್ರೀ ಎ.ಎಸ್. ಸವಸುದ್ದಿ 1ನೇ ದರ್ಜೆಯ ಗುತ್ತಿಗೆದಾರರು, ಬೆಳಗಾಂ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 81 ಅಪಿಬಂ 2009, ಬೆಂಗಳೂರು, ದಿನಾಂಕ 15ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ ಖಾನಾಪುರ ತಾಲ್ಲೂಕು ಪಾರಿಶ್ವಾಡ– ದೇವಲತ್ತಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 47,12,924–00 ಗಳ ಮೇಲೆ ಶೇಕಡ 12.95 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 53,23,248–00 ಗಳಿಗೆ (ಐವತ್ಮೂರು ಲಕ್ಷದ ಇಪ್ಪತ್ಮೂರು ಸಾವಿರದ ಇನ್ನೂರ ನಲವತ್ತೆಂಟು

ರೂ.ಗಳು ಮಾತ್ರ) ಶ್ರೀ ಎ.ಎಸ್. ಸವಸುದ್ದಿ 1ನೇ ದರ್ಜೆಯ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ : 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
(ಕೆ. ಸುಧಾಕರ ಶೆಟ್ಟಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್–180

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕು, ಹಣಕೋಣ ಕೆರೆ ಟೇಲ್ ಚಾನೆಲ್ ದುರಸ್ತಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ** :. 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009(2), ದಿನಾಂಕ 26–02–2009.

2. ದಿನಾಂಕ 11–11–09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ) ವಲಯ/ಬಿಜೆಪಿ/ಪಿಬಿ–2/2009–10/6678.

3. ಅಧ್ಯಕ್ಷರು ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26–12–09ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/08–09/4972.

**ಪ್ರಸ್ತಾವನೆ :**

ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕು, ಹಣಕೋಣ ಕೆರೆ ಟೇಲ್ ಚಾನೆಲ್ ದುರಸ್ತಿ ಕಾಮಗಾರಿಯ 40.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 26–02–09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಳಿಯಾಳ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ: 21–02–2009 |
| 2 | ಕನ್ನಡ ಪ್ರಭ ದಿನಪತ್ರಿಕೆ | ದಿನಾಂಕ: 03–03–2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 4 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ 22–07–09ರಂದು ತೆರೆಯಲಾಗಿದ್ದು. ಅದರಲ್ಲಿ ಈ ಕೆಳಕಂಡ ಒಬ್ಬರು ಗುತ್ತಿದಾರರ ಟೆಂಡರ್ ಮಾತ್ರ ಅರ್ಹವಾಗಿದ್ದು, ಅವರು ಸೂಚಿಸಿರುವ ದರಗಳ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 35,73,247/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 35,33,365/– |

| ಕ್ರಮ ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
|---|---|---|---|---|
| 1 | ಆರ್.ಪಿ. ಡಯಾಸ್, 1ನೇ ದರ್ಜೆ ಗುತ್ತಿಗೆದಾರರು | ರೂ. 42,30,359/– | 18.32 ಹೆಚ್ಚು | 19.72 ಹೆಚ್ಚು |

ಮೇಲ್ಕಂಡಂತೆ ಶ್ರೀ ಆರ್.ಪಿ. ಡಯಾಸ್, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿರುತ್ತಾರೆ. ಇವರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 42,30,359–00ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತ ರೂ. 35,33,365–00ಕ್ಕೆ ಹೋಲಿಸಿದಾಗ ಶೇ. 19.72 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–11–09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 35,33,365–00ಗಳ ಮೇಲೆ ಶೇಕಡ 13.25ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 40,01,536–00ಗಳಿಗೆ ಕಾಮಗಾರಿಯನ್ನು ಶ್ರೀ ಆರ್.ಪಿ. ಡಯಾಸ್, 1ನೇ ದರ್ಜೆ ಗುತ್ತಿಗೆದಾರರು, ಕುಮಟಾ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಸನೀಇ 76 ಕೆಜಿದು 2009, ಬೆಂಗಳೂರು, ದಿನಾಂಕ 15ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕು, ಹಣಕೋಣ ಕೆರೆ ಟೇಲ್ ಚಾನೆಲ್ ದುರಸ್ತಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 35,33,365–00ಗಳ ಮೇಲೆ ಶೇಕಡ 13.25ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 40,01,536–00ಗಳಿಗೆ (ನಲವತ್ತು ಲಕ್ಷದ ಒಂದು ಸಾವಿರದ ಐನೂರ ಮೂವತ್ತಾರು ರೂ.ಗಳು ಮಾತ್ರ) ಶ್ರೀ ಆರ್.ಪಿ.ಡಯಾಸ್, 1ನೇ ದರ್ಜೆ ಗುತ್ತಿಗೆದಾರರು, ಕುಮಟಾ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 181

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು ನವಲಿ ಏತ ನೀರಾವರಿ ಯೋಜನೆಯ ರೈಸಿಂಗ್ ಮೇನ್ ಹಾಗೂ ಕಾಲುವೆಗಳ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009(2), ದಿನಾಂಕ 26–02–2009.
2. ದಿನಾಂಕ 03–11–09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ) ವಲಯ/ಬಿಜೆಪಿ/ಪಿಬಿ–2/2009–10/6537.
3. ಅಧ್ಯಕ್ಷರು ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26–12–09ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/08–09/4972.

**ಪ್ರಸ್ತಾವನೆ :**

ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು ನವಲಿ ಏತ ನೀರಾವರಿ ಯೋಜನೆಯ ರೈಸಿಂಗ್ ಮೇನ್ ಹಾಗೂ ಕಾಲುವೆಗಳ ಅಭಿವೃದ್ಧಿ ಕಾಮಗಾರಿಯ 50.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 16–02–09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ: 01–06–2009 |
| 2 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿನಾಂಕ: 04–06–2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 3 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ಟೆಂಡರ್‌ಗಳನ್ನು ದಿನಾಂಕ 09–07–09ರಂದು ತೆರೆದಿದ್ದು, ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 48,68,409/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 65,13,000/– |

| ಕ್ರಮ ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
|---|---|---|---|---|
| 1 | ಎಂ. ಸಿದ್ಧರಾಮನ ಗೌಡ 1ನೇ ದರ್ಜೆ ಗುತ್ತಿಗೆದಾರರು | ರೂ. 85,39,066/– | 75.39 ಹೆಚ್ಚು | 31.11 ಹೆಚ್ಚು |
| **2** | ಮೆ: ಕರ್ನಾಟಕ ಸಿಮೆಂಟ್ ಪೈಪ್ ಫ್ಯಾಕ್ಟರಿ, 1ನೇ ದರ್ಜೆ ಗುತ್ತಿಗೆದಾರರು | ರೂ. 88,80,950/– | 82.42 ಹೆಚ್ಚು | 36.35 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ. 1ರಲ್ಲಿರುವ ಶ್ರೀ ಎಂ. ಸಿದ್ಧರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 85,39,066–00ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತ ರೂ. 65,13,000–00ಕ್ಕೆ ಹೋಲಿಸಿದಾಗ ಶೇ. 31.11 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–11–09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 65,13,000–00ಗಳ ಮೇಲೆ ಶೇಕಡ 14.25ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 74,41,103–00ಗಳಿಗೆ ಕಾಮಗಾರಿಯನ್ನು ಶ್ರೀ ಎಂ. ಸಿದ್ಧರಾಮನ ಗೌಡ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಸನೀಇ 40 ಏನೀಯೋ 2009, ಬೆಂಗಳೂರು, ದಿನಾಂಕ 15ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು, ನವಲಿ ಏತ ನೀರಾವರಿ ಯೋಜನೆಯ ರೈಸಿಂಗ್ ಮೇನ್ ಹಾಗೂ ಕಾಲುವೆಗಳ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 65,13,000–00ಗಳ ಮೇಲೆ ಶೇಕಡ 14.25ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 74,41,103–00ಗಳಿಗೆ (ಎಪ್ಪತ್ತ್ನಾಲ್ಕು ಲಕ್ಷದ ನಲವತ್ತೊಂದು ಸಾವಿರದ ಒಂದು ನೂರ ಮೂರು ರೂ.ಗಳು ಮಾತ್ರ) ಶ್ರೀ ಎಂ. ಸಿದ್ಧರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 182

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲೆ, ರಾಯಭಾಗ ತಾಲ್ಲೂಕು, ಅಂಕಲಿ ನಸಲಾಪುರ ರಸ್ತೆ ಬ್ರಿಡ್ಜ್ ಹತ್ತಿರ ಕರಕನಾಳ ಹಳ್ಳಕ್ಕೆ ಬಂದಾರ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**1. ದಿನಾಂಕ 05–02–2009ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009

2. ದಿನಾಂಕ 11–11–09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ವಲಯ/ವಿಜಾಪುರ/ಸ.ಇಂ–1/2009–10/6707.

3. ಅಧ್ಯಕ್ಷರು ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26–12–09ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/08–09/4972

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 14477.85 ರೂ. ಲಕ್ಷ ಅಂದಾಜು ಮೊತ್ತದ 260 ಕಾಮಗಾರಿಗಳ ಅಂದಾಜುಗಳಿಗೆ ಆರ್.ಐ.ಡಿ.ಎಫ್.–14ರಡಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಅವುಗಳ ಪೈಕಿ 54.00 ಲಕ್ಷ ರೂ.ಗಳ ಅಂದಾಜಿನ ಬೆಳಗಾಂ ಜಿಲ್ಲೆ, ರಾಯಭಾಗ ತಾಲ್ಲೂಕು, ಅಂಕಲಿ ನಸಲಾಪುರ ರಸ್ತೆ ಬ್ರಿಡ್ಜ್ ಹತ್ತಿರ ಕರಕನಾಳ ಹಳ್ಳಕ್ಕೆ ಬಾಂದಾರ ನಿರ್ಮಾಣ ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾಂ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ: 20–07–2009 |
| 2 | ಪ್ರಜಾವಾಣಿ ದಿನಪತ್ರಿಕೆ | ದಿನಾಂಕ: 28–07–2009 |
| 3 | ಕನ್ನಡ ಪ್ರಭಾ ದಿನಪತ್ರಿಕೆ | ದಿನಾಂಕ: 29–07–2009 |
| 4 | ಕರ್ನಾಟಕ ರಾಜ್ಯ ಪತ್ರ | ದಿನಾಂಕ: 30–07–2009 ಮತ್ತು 06–08–2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 32 ಜನ ಗುತ್ತಿಗೆದಾರರ ಪೈಕಿ ಮೂರು ಜನ ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ 01–09–09ರಂದು ತೆರೆಯಲಾಗಿದೆ. ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 49,35,593/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 49,73,420/– |

| ಕ್ರಮ ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
|---|---|---|---|---|
| 1 | ಎಸ್.ಬಿ. ಲೋಕಣ್ಣವರ, 1ನೆ ದರ್ಜೆ ಗುತ್ತಿಗೆದಾರರು | ರೂ. 59,87,124/– | 21.31 ಹೆಚ್ಚು | 20.38 ಹೆಚ್ಚು |

| | | | | |
|---|---|---|---|---|
| 2 | ಐ.ಎಸ್. ಗುಂಡೇವಾಡಿ<br>1ನೇ ದರ್ಜೆ ಗುತ್ತಿಗೆದಾರರು | ರೂ. 60,04,129/- | 21.65 ಹೆಚ್ಚು | 20.72 ಹೆಚ್ಚು |
| 3 | ಎಸ್.ಡಿ. ಹಮ್ಮಿನಿ<br>1ನೇ ದರ್ಜೆ ಗುತ್ತಿಗೆದಾರರು | ರೂ. 60,58,463/- | 22.75 ಹೆಚ್ಚು | 21.82 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ. 1ರಲ್ಲಿರುವ ಶ್ರೀ ಎಸ್.ಬಿ. ಲೋಕಣ್ಣನವರ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 59,87,124-00ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತ ರೂ. 49,73,420-00ಕ್ಕೆ ಹೋಲಿಸಿದಾಗ ಶೇ. 20.38 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13-11-09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 49,73,420-00ಗಳ ಮೇಲೆ ಶೇಕಡ 12.95ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 56,17,478-00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಬಿ ಲೋಕಣ್ಣನವರ, 1ನೇ ದರ್ಜೆ ಗುತ್ತಿಗೆದಾರರು, ಬೆಳಗಾಂ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಸನೀಇ 84 ಅಪಿಬಂ 2009, ಬೆಂಗಳೂರು, ದಿನಾಂಕ 15ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ, ರಾಯಭಾಗ ತಾಲ್ಲೂಕು, ಅಂಕಲಿ ನಸಲಾಪುರ ರಸ್ತೆ ಬ್ರಿಡ್ಜ್ ಹತ್ತಿರ ಕರಕನಾಳ ಹಳ್ಳಕ್ಕೆ ಬಾಂದಾರ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 49,73,420-00ಗಳ ಮೇಲೆ ಶೇಕಡ 12.95ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 56,17,478-00ಗಳಿಗೆ (ಐವತ್ತಾರು ಲಕ್ಷದ ಹದಿನೇಳು ಸಾವಿರದ ನಾಲ್ಕು ನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ಶ್ರೀ ಎಸ್.ಬಿ ಲೋಕಣ್ಣನವರ, 1ನೇ ದರ್ಜೆ ಗುತ್ತಿಗೆದಾರರು, ಬೆಳಗಾಂ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 183

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಕುಷ್ಟಗಿ ಜಿಲ್ಲೆ ಹಾಗೂ ತಾಲ್ಲೂಕಿನ ಅಳವಂಡಿ ಗ್ರಾಮದ ಹತ್ತಿರ ಹೊಸಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ** : 1. ದಿನಾಂಕ 05-02-2009ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 2009.

2. ದಿನಾಂಕ 28-10-09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ) ವಲಯ/ತಾಂ2-3/ಸ.ಇಂ-7/2009-10/6389.
3. ಅಧ್ಯಕ್ಷರು ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26-12-09ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/08-09/4972.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 14477.85 ಲಕ್ಷ ಅಂದಾಜು ಮೊತ್ತದ 260 ಕಾಮಗಾರಿಗಳ ಅಂದಾಜುಗಳಿಗೆ ಆರ್.ಐ.ಡಿ.ಎಫ್.-14ರಡಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಅವುಗಳ ಪೈಕಿ 145.00 ಲಕ್ಷ ರೂ.ಗಳ ಅಂದಾಜಿನ ಕುಷ್ಟಗಿ ಜಿಲ್ಲೆ, ಹಾಗೂ ತಾಲ್ಲೂಕಿನ ಅಳವಂಡಿ ಗ್ರಾಮದ ಹತ್ತಿರ ಹೊಸಕೆರೆ ನಿರ್ಮಾಣ ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ ಮತ್ತು ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ: 28-02-2009 |
| 2 | ಸಂಯುಕ್ತ ಕರ್ನಾಟಕ & ವಿಜಯ ಕರ್ನಾಟಕ ದಿನಪತ್ರಿಕೆಗಳು | ದಿನಾಂಕ: 01-03-2009 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ಅಂತಿಮವಾಗಿ ದಿನಾಂಕ 11-08-2009ರಂದು ತಿದ್ದುಪಡಿ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಿರುತ್ತಾರೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ: 17-08-2009 |
| 2 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ: 22-08-2009 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 35 ಜನ ಗುತ್ತಿಗೆದಾರರ ಪೈಕಿ 8 ಜನ ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ತಾಂತ್ರಿಕ ಬಿಡ್‌ಗಳನ್ನು ದಿನಾಂಕ: 06-10-09ರಂದು ಪರಿಶೀಲಿಸಿದ್ದು, ಅವರುಗಳು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,09,83,073/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 1,10,02,462/- |

| ಕ್ರಮ ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
|---|---|---|---|---|
| 1 | ಶರಣಗೌಡ ಬಿ. ಪೊಲೀಸ್ ಪಾಟೀಲ್<br>1ನೇ ದರ್ಜೆ ಗುತ್ತಿಗೆದಾರರು | ರೂ. 1,37,12,695/- | 24.85 ಹೆಚ್ಚು | 24.63 ಹೆಚ್ಚು |
| 2 | ಶರಣಗೌಡ ಎ. ಪಾಟೀಲ್<br>1ನೇ ದರ್ಜೆ ಗುತ್ತಿಗೆದಾರರು | ರೂ. 1,40,95,716/- | 28.34 ಹೆಚ್ಚು | 28.11 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ. 1ರಲ್ಲಿರುವ ಶ್ರೀ ಶರಣಗೌಡ ಬಿ. ಪೊಲೀಸ್ ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 1,37,12,695-00ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತ ರೂ. 1,10,02,462-00ಕ್ಕೆ ಹೋಲಿಸಿದಾಗ ಶೇ. 24.63 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13-11-09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,10,02,462-00ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,23,77,770-00ಗಳಿಗೆ ಕಾಮಗಾರಿಯನ್ನು ಶ್ರೀ ಶರಣಗೌಡ ಬಿ. ಪೊಲೀಸ್ ಪಾಟೀಲ್ 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು

ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಸನೀಇ 26 ಹೊಕೆನಿ 2009, ಬೆಂಗಳೂರು, ದಿನಾಂಕ 15ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕುಷ್ಟಗಿ ಜಿಲ್ಲೆ, ಹಾಗೂ ತಾಲ್ಲೂಕಿನ ಅಳವಂಡಿ ಗ್ರಾಮದ ಹತ್ತಿರ ಹೊಸಕೆರೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,10,02,462-00ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,23,77,770-00ಗಳಿಗೆ (ಒಂದು ಕೋಟಿ ಇಪ್ಪತ್ಮೂರು ಲಕ್ಷದ ಎಪ್ಪತ್ತೇಳು ಸಾವಿರದ ಏಳು ನೂರ ಎಪ್ಪತ್ತು ರೂ.ಗಳು ಮಾತ್ರ) ಶ್ರೀ ಶರಣಗೌಡ ಬಿ ಪೊಲೀಸ್ ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 184

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ರಾಯಭಾಗ ತಾಲ್ಲೂಕು, ಬಿರನಾಳ ಗ್ರಾಮದ ಕಾಂಬಳೆ ಹತ್ತಿರ ಹಳ್ಳಕ್ಕೆ (ರಿ.ಸಂ.-49) ಬಾಂದಾರ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**1. ದಿನಾಂಕ 03-11-09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ) ವಲಯ/ವಿಜಾಪುರ/ಸ.ಇಂ-1/2009-10/6532.

2. ಅಧ್ಯಕ್ಷರು ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26-12-09ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08-09/4972.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ರಾಯಭಾಗ ತಾಲ್ಲೂಕು, ಬಿರನಾಳ ಗ್ರಾಮದ ಕಾಂಬಳೆ ತೋಟದ ಹತ್ತಿರ ಹಳ್ಳಕ್ಕೆ (ರಿ.ಸಂ.49) ಬಾಂದಾರ ನಿರ್ಮಾಣ ಕಾಮಗಾರಿಯ 30.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ದಿನಾಂಕ 27-02-09ರಂದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾಂ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ: 08-06-2009 |
| 2 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿನಾಂಕ: 21-06-2009 |
| 3 | ಕರ್ನಾಟಕ ರಾಜ್ಯ ಪತ್ರ | ದಿನಾಂಕ: 25-06-2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 13 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ನ್ನು ದಿನಾಂಕ 17-08-09ರಂದು ತೆರೆಯಲಾಗಿದೆ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 29,60,354/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 29,73,550/– |

| ಕ್ರಮ ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
|---|---|---|---|---|
| 1 | ಎಸ್.ಪಿ. ಸಂಕಪಾಲ 1ನೇ ದರ್ಜೆ ಗುತ್ತಿಗೆದಾರರು | ರೂ. 36,97,672/– | 24.91 ಹೆಚ್ಚು | 24.35 ಹೆಚ್ಚು |
| 2 | ಆರ್.ಆರ್. ಪಿದಾಯಿ 1ನೇ ದರ್ಜೆ ಗುತ್ತಿಗೆದಾರರು | ರೂ. 38,47,115/– | 29.95 ಹೆಚ್ಚು | 29.38 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ. 1ರಲ್ಲಿರುವ ಶ್ರೀ ಎಸ್.ಪಿ. ಸಂಕಪಾಲ, 1ನೇ ದರ್ಜೆ ಗುತ್ತಿಗೆದಾರರು ಅತ್ಯಂತ ಕಡಿಮೆ ದರಗಳನ್ನು ನಮೂದಿಸಿರುವ ಟೆಂಡರ್‌ದಾರರಾಗಿದ್ದು, ಇವರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 36,97,672–00ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತ ರೂ. 29,73,550–00ಕ್ಕೆ ಹೋಲಿಸಿದಾಗ ಶೇ. 24.35 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–11–09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 29,73,550–00ಗಳ ಮೇಲೆ ಶೇಕಡ 12.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 33,52,678–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಪಿ ಸಂಕಪಾಲ, 1ನೇ ದರ್ಜೆ ಗುತ್ತಿಗೆದಾರರು ಬೆಳಗಾಂ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಸನೀಇ 82 ಅಪಿಬಂ 2009, ಬೆಂಗಳೂರು, ದಿನಾಂಕ 18ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ, ರಾಯಭಾಗ ತಾಲ್ಲೂಕು, ಬಿರನಾಳ ಗ್ರಾಮದ ಕಾಂಬಳೆ ಹತ್ತಿರ ಹಳ್ಳಕ್ಕೆ (ರಿ.ಸಂ.–49) ಬಾಂದಾರ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 29,73,550–00ಗಳ ಮೇಲೆ ಶೇಕಡ 12.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 33,52,678–00ಗಳಿಗೆ (ಮೂವತ್ತ್ಮೂರು ಲಕ್ಷ ಐವತ್ತೆರಡು ಸಾವಿರದ ಆರುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ಶ್ರೀ ಎಸ್.ಪಿ. ಸಂಕಪಾಲ, 1ನೇ ದರ್ಜೆ ಗುತ್ತಿಗೆದಾರರು, ಬೆಳಗಾಂ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 185

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ಚಿಕ್ಕಮಗಳೂರು ಜಿಲ್ಲೆ ಹಾಗೂ ತಾಲ್ಲೂಕಿನ ಕೋಟೆ ಚಾನಲ್ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1. ದಿನಾಂಕ 13/05/08 ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2007.

2. ದಿನಾಂಕ 6/11/09ರ ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ತಾಂ–2/ಸ.ಇಂ–5/ಹಾಸನ ಟೆಂಡರ್/ಕೋಟೆ ಚಾನಲ್ ಅಭಿವೃದ್ಧಿ/2009–10/4307.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26/12/09 ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/08–09/4972.

**ಪ್ರಸ್ತಾವನೆ :**

ಮೇಲೆ(1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ.9036.00 ಲಕ್ಷ ಅಂದಾಜು ಮೊತ್ತದ 162 ಕಾಮಗಾರಿಗಳ ಅಂದಾಜುಗಳಿಗೆ ಹೆಚ್ಚಿನ ಆತ್ಮಹತ್ಯೆ ವರದಿಯಾಗಿರುವ ಜಿಲ್ಲೆಗಳಲ್ಲಿ ರೈತ ಪುನರ್ವಸತಿಗಾಗಿ ಅನುಮೋದನೆಯಾಗಿರುವ ವಿಶೇಷ ಪ್ಯಾಕೇಜ್‌ನಡಿ ನಬಾರ್ಡ್‌ನ ಆರ್.ಐ.ಡಿ.ಎಫ್– 13ರಡಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಅವುಗಳ ಪೈಕಿ 167–00 ಲಕ್ಷ ರೂಗಳ ಅಂದಾಜಿನ ಚಿಕ್ಕಮಗಳೂರು ಜಿಲ್ಲೆ ಹಾಗೂ ತಾಲ್ಲೂಕಿನ ಕೋಟೆ ಚಾನಲ್ ಅಭಿವೃದ್ಧಿ ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮದಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | ದಿ:11/02/2009 |
| 2 | ಕರ್ನಾಟಕ ರಾಜ್ಯ ಪತ್ರ | ದಿ:19/02/2009 |
| 2 | ವಿಜಯ ಕರ್ನಾಟಕ, ಉದಯವಾಣಿ ಹಾಗೂ ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಗಳು | ದಿ:19/02/2009 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ಅಂತಿಮವಾಗಿ ದಿನಾಂಕ 04/08/09 ರಂದು ತಿದ್ದುಪಡಿ ಪ್ರಕಟಣೆಯನ್ನು ಪ್ರಕಟಿಸಿರುತ್ತಾರೆ. ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ ಇಬ್ಬರು ಗುತ್ತಿಗೆದಾರರು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ತಾಂತ್ರಿಕ ಬಿಡ್‌ಗಳನ್ನು ದಿನಾಂಕ 18/08/09 ರಂದು ಪರಿಶೀಲಿಸಿದ್ದು, ಅವರುಗಳು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.1,65,80,768/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.1,70,96,723/– |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಕೋರಮಂಡಲ್ ಇನ್‌ಫ್ರಾಸ್ಟ್ರಕ್ಚರ್ ಪ್ರೈ.ಲಿ. 1ನೇ ದರ್ಜೆ ಗುತ್ತಿಗೆದಾರರು | ರೂ.2,17,31,912/– | 31.06 ಹೆಚ್ಚು | 27.11 ಹೆಚ್ಚು |
| 2 | ಕೀರ್ತಿ ರೆಸಿಡೆನ್ಸಿ, 1ನೇ ದರ್ಜೆ ಗುತ್ತಿಗೆದಾರರು | ರೂ.2,31,80,079/– | 39.80 ಹೆಚ್ಚು | 35.58 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ.1ರಲ್ಲಿರುವ ಮೆ: ಕೋರಮಂಡಲ್ ಇನ್‌ಫ್ರಾಸ್ಟ್ರಕ್ಚರ್ ಪ್ರೈ.ಲಿ., 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ.2,17,31,912–00 ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತ ರೂ.1,70,96,723–00ಕ್ಕೆ ಹೋಲಿಸಿದಾಗ ಶೇ.27.11 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ

ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13/11/09 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,70,96,723-00ಗಳ ಮೇಲೆ ಶೇಕಡ 13.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,94,47,522-00 ಗಳಿಗೆ ಕಾಮಗಾರಿಯನ್ನು ಮೆ:ಕೋರಮಂಡಲ್ ಇನ್‌ಫ್ರಾಸ್ಟ್ರಕ್ಚರ್ ಪ್ರೈ.ಲಿ., 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 75 ಕೆಜಿದು 2009, ಬೆಂಗಳೂರು, ದಿನಾಂಕ 15ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ ಹಾಗೂ ತಾಲ್ಲೂಕಿನ ಕೋಟೆ ಚಾನಲ್ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ, 1,70,96,723-00ಗಳ ಮೇಲೆ ಶೇಕಡಾ 13.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,94,47,522-00 ಗಳಿಗೆ(ಒಂದು ಕೋಟಿ ತೊಂಭತ್ತ್ನಾಲ್ಕು ಲಕ್ಷದ ನಲವತ್ತೇಳು ಸಾವಿರದ ಐನೂರ ಇಪ್ಪತ್ತೆರಡು ರೂ.ಗಳು ಮಾತ್ರ) ಮೆ: ಕೋರಮಂಡಲ್ ಇನ್‌ಫ್ರಾಸ್ಟ್ರಕ್ಚರ್ ಪ್ರೈ.ಲಿ., 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು .
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 186

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಜಲ ಸಂಪನ್ಮೂಲ ಸಚಿವಾಲಯ**

ವಿಷಯ: ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕಿನ ಉಂಡಾಡಿಕೊಪ್ಪ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

ಓದಲಾಗಿದೆ: 1) ದಿನಾಂಕ 29/01/09ರ ಸರ್ಕಾರದ ಆದೇಶಸಂಖ್ಯೆ: ಸನೀಇ 10 ನಯೋಕಾ 2007.

2) ದಿನಾಂಕ 07/11/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ತಾಂ-3/ಸ.ಇಂ-8/ ಶಿವಮೊಗ್ಗ/ ಟೆಂಡರ್ 2009-10/4335.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26/12/09ರ ಪತ್ರ ಸಂಖ್ಯೆ:ಮುಸದ/ಆಪ್ತ ಶಾಖೆ/ಟೆಂಡರ್/08-09/4972.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹೆಚ್ಚಿನ ಆತ್ಮಹತ್ಯೆಗಳು ವರದಿ ಆಗಿರುವ ಜಿಲ್ಲೆಗಳಲ್ಲಿ ರೈತರ ಪುನರ್ವಸತಿಗಾಗಿ ಅನುಮೋದನೆಯಾಗಿರುವ ವಿಶೇಷ ಪ್ಯಾಕೇಜ್‌ನಡಿ ನಬಾರ್ಡ್ ಆರ್.ಐ.ಡಿ.ಎಫ್-14 ರಲ್ಲಿ ರೂ.4821.40 ಲಕ್ಷ ಅಂದಾಜು ಮೊತ್ತ 98 ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಇದರಲ್ಲಿ 83.00 ಲಕ್ಷ ರೂಗಳ ಅಂದಾಜಿನ ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕಿನ ಉಂಡಾಡಿಕೊಪ್ಪ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ:31/01/2009 |
| 2 | ಉದಯವಾಣಿ ದಿನಪತ್ರಿಕೆ | ದಿ:07/02/2009 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ಅಂತಿಮವಾಗಿ ದಿನಾಂಕ:16/09/09 ರಂದು ತಿದ್ದುಪಡಿ ಪ್ರಕಟಣೆಯನ್ನು ಪ್ರಕಟಿಸಿರುತ್ತಾರೆ. ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 8 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ.ಇವರ ತಾಂತ್ರಿಕ ಬಿಡ್‌ಗಳನ್ನು ದಿನಾಂಕ 26/09/09ರಂದು ಪರಿಶೀಲಿಸಿದ್ದು, ಅದರಲ್ಲಿ ಈ ಕೆಳಕಂಡ ಒಬ್ಬರು ಗುತ್ತಿಗೆದಾರರ ಟೆಂಡರ್ ಮಾತ್ರ ಅರ್ಹವಾಗಿದ್ದು, ಅವರು ಸೂಚಿಸಿರುವ ದರಗಳ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.75,40,479/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.73,81,389/- |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತುದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಎಸ್.ಬಿ.ಪಾಟೀಲ್ 1ನೇ ದರ್ಜೆ ಗುತ್ತಿಗೆದಾರರು | ರೂ.86,55,594/- | 14.79 ಹೆಚ್ಚು | 17.26 ಹೆಚ್ಚು |

ಮೇಲ್ಕಂಡಂತೆ ಶ್ರೀಎಸ್.ಬಿ. ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿರುವ ಮೊತ್ತ ರೂ.86,55,594-00 ಗಳಾಗಿದ್ದು, ಈ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 17.26ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ(2)ರ ಓದಲಾದ ದಿನಾಂಕ 07/11/09ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13/11/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.73,81,389-00\ಗಳ ಮೇಲೆ ಶೇಕಡಾ 12.95 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.83,37,279-00 ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಬಿ. ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 83 ಅಪಿಬಂ 2009, ಬೆಂಗಳೂರು, ದಿನಾಂಕ 15ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕಿನ ಉಂಡಾಡಿಕೊಪ್ಪ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜುಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.73,81,389-00 ಗಳ ಮೇಲೆ ಶೇಕಡ 12.95 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.83,37,279-00 ಗಳಿಗೆ(ಎಂಭತ್ಮೂರು ಲಕ್ಷದ ಮೂವತ್ತೇಳು ಸಾವಿರದ ಇನ್ನೂರ ಎಪ್ಪತ್ತೊಂಭತ್ತು ರೂ.ಗಳು ಮಾತ್ರ) ಶ್ರೀ ಎಸ್.ಬಿ.ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.187

**(ಕೆ.ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಜಲ ಸಂಪನ್ಮೂಲ ಸಚಿವಾಲಯ**

ವಿಷಯ: 2009-10 ನೇ ಸಾಲಿನ ವಿಶೇಷ ಘಟಕಯೋಜನೆ ಹಾಗೂ ಗಿರಿಜನ ಉಪಯೋಜನೆ ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ (ಉತ್ತರ) ವಲಯ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

ಓದಲಾಗಿದೆ:
1) ಪತ್ರ ಸಂಖ್ಯೆ : ಮುಇಂ/ ಸನೀ(ಉ)ವಲಯ/ ಬಿಜೆಪಿ/ ಎಇ-1/2009-10/160, ದಿನಾಂಕ:08.01.2009
2) ಪತ್ರ ಸಂಖ್ಯೆ : ಮುಇಂ/ ಸನೀ(ಉ)ವಲಯ/ ಬಿಜೆಪಿ/ ಎಇ-6/2009-10/7474, ದಿನಾಂಕ:16.12.2009
3) ಪತ್ರ ಸಂಖ್ಯೆ : ಮುಇಂ/ ಸನೀ(ಉ)ವಲಯ/ ಬಿಜೆಪಿ/ ಎಇ-6/2009-10/7487, ದಿನಾಂಕ:16.12.2009
4) ಪತ್ರ ಸಂಖ್ಯೆ : ಮುಇಂ/ ಸನೀ(ಉ)ವಲಯ/ ಬಿಜೆಪಿ/ ಪಿಬಿ-9/2009-10/7302, ದಿನಾಂಕ:07.12.2009
5) ಪತ್ರ ಸಂಖ್ಯೆ : ಮುಇಂ/ ಸನೀ(ಉ)ವಲಯ/ ಬಿಜೆಪಿ/ ಎಇ-6/2009-10/7198, ದಿನಾಂಕ:03.12.2009
6) ಸರ್ಕಾರದ ಆದೇಶ ಸಂಖ್ಯೆ: ಸನೀಇ 98 ಆವಿಸಂ 2009 ದಿನಾಂಕ 06.01.2010
7) ಸರ್ಕಾರದ ಆದೇಶ ಸಂಖ್ಯೆ: ಸನೀಇ 229 ಮಸಾವಿ 2009 ದಿನಾಂಕ 09.12.2009

**ಪ್ರಸ್ತಾವನೆ :**

2009-10 ನೇ ಸಾಲಿನ ಆಯವ್ಯಯದ "ಅಪೆಂಡಿಕ್ಸ್-ಇ" ನ ಲೆಕ್ಕ ಶೀರ್ಷಿಕೆ 4702-00-101-3-01-422 ವಿಶೇಷ ಘಟಕ ಯೋಜನೆ-ಏತ ನೀರಾವರಿ ಯೋಜನೆಗಳು, ಹಾಗೂ ಲೆಕ್ಕ ಶೀರ್ಷಿಕೆ 4702-00-101-3-01-423 ಗಿರಿಜನ ಉಪ ಯೋಜನೆ-ಏತ ನೀರಾವರಿ ಯೋಜನೆಗಳು ಅಡಿ ಅನುಮೋದನೆಗೊಂಡಿರುವ ಕಾಮಗಾರಿಗಳ ಪೈಕಿ 236.70 ಲಕ್ಷ ರೂ. ಗಳ ಅಂದಾಜು ಮೊತ್ತ ಹೊಂದಿರುವ 5 ಕಾಮಗಾರಿಗಳ (ಕಾಮಗಾರಿವಾರು ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಮೇಲೆ ಓದಲಾದ ಪತ್ರಗಳಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಪೈಕಿ 4 ಕಾಮಗಾರಿಗಳ ವಾಸ್ತವಿಕ ಅಂದಾಜು ಮೊತ್ತವು ಅನುಬಂಧ-ಇ ನಲ್ಲಿ ತಿಳಿಸಿರುವ ಮೊತ್ತಕ್ಕಿಂತ ಹೆಚ್ಚಾದ್ದರಿಂದ, ಅವುಗಳ ಮಂಜೂರಾತಿಗೆ ಅವಶ್ಯವಿರುವ ಹೆಚ್ಚುವರಿ ಅನುದಾನವನ್ನು ಮೇಲೆ (6) ಮತ್ತು (7) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಮರು ಹೊಂದಾಣಿಕೆ ಮಾಡಲಾಗಿದೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2009-10 ನೇ ಸಾಲಿಗೆ ಮುಂದುವರೆಸಿರುವ 2007-08ನೇ ಸಾಲಿನ ಸಣ್ಣ ನೀರಾವರಿ ಬೆಳಗಾವಿ ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಗಳ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕಾಮಗಾರಿ ವಿವರ, ಸೃಷ್ಠಿಯಾಗಲಿರುವ ಹೊಸ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ಕಾಮಗಾರಿವಾರು ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 228 ಮಸಾವಿ 2009, ಬೆಂಗಳೂರು, ದಿನಾಂಕ: 21 ನೇ ಜನವರಿ 2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ವ್ಯಾಪ್ತಿಗೆ ಬರುವ ಅಡಕಗೊಳಿಸಿರುವ ಅನುಬಂಧದಲ್ಲಿ ತಿಳಿಸಿರುವ ಒಟ್ಟು ರೂ236.70 ಲಕ್ಷ (ರೂ.ಎರಡುನೂರ ಮೂವತ್ತಾರು ಲಕ್ಷ ಎಪ್ಪತ್ತು ಸಾವಿರ ಮಾತ್ರ) ಮೊತ್ತದ 5 ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.

2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.

3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.

4) ಕಾಮಗಾರಿಯ ಅಂದಾಜು ಪಟ್ಟಿಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯ ತೀರುವಳಿ ಪಡೆಯುವುದು.

5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದು.

6) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.

7) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.

8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.

9) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.

10) ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.188

**( ಕೆ. ಸುಧಾಕರ ಶೆಟ್ಟಿ )**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಅನುಬಂಧ**

ಸರ್ಕಾರದ ಆದೇಶ ಸಂಖ್ಯೆ ಸನೀಇ 228 ಮಸಾವಿ 2009 ದಿನಾಂಕ 21ನೇ ಜನವರಿ 2010

(ಮೊತ್ತ ಲಕ್ಷ ರೂಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | | ಸ್ವೀಕೃತವಾಗಿರುವ ಅಂದಾಜು ಮೊತ್ತ | ಅನುಬಂಧ-ಇ ಅಂದಾಜು ಮೊತ್ತ | ಅನುಬಂಧ-ಇ ಅನುದಾನ | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| 1 | 2 | | 3 | 4 | 5 | 6 | 7 | 8 | 9 |
| 4702-00-101-3-01-422 ವಿಶೇಷ ಘಟಕ ಯೋಜನೆ-ಏತ ನೀರಾವರಿ ಯೋಜನೆಗಳು | | | | | | | | | |
| 1 | ಬೆಳಗಾವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ನಿಲಜಿ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ | | 72.00 | 72.00 | 28.80 | ಕೃಷ್ಣಾ | ಹೊಸ ಕಾಮಗಾರಿ | 17 | ಒಟ್ಟಾರೆ 12ಕಿ.ಮೀ. ಉದ್ದ,160 ಮಿ.ಮಿ.ವ್ಯಾಸದ ಪಿವಿಸಿ ಮಾದರಿಯ ಏರು ಕೊಳವೆ ಮಾರ್ಗ,10 ಹೆಚ್.ಪಿ. ಸಾಮರ್ಥ್ಯದ 1+5ಹೆಚ್.ಪಿ. ಸಾಮರ್ಥ್ಯದ 1 ಕಾರ್ಯನಿರತ ಹಾಗೂ 10 ಹೆಚ್.ಪಿ. ಸಾಮರ್ಥ್ಯದ 1 ಸ್ಟಾಂಡ್ ಬೈ ಸಬ್‌ಮರ್ಸಿಬಲ್ ಪಂಪುಗಳನ್ನು ಯೋಜನೆಯಲ್ಲಿ ಅಳವಡಿಸಿದೆ. |
| 2 | ಬಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕಿನ ಕೊಕಟನೂರ-ಚಿಕ್ಕಸಿಂದಗಿ ಗ್ರಾಮಗಳ ಸ.ನಂ. 103, 93/2 ಜಮೀನುಗಳಿಗೆ ಏತ ನೀರಾವರಿ ಯೋಜನೆ ನಿರ್ಮಾಣ. | | 37.50 | 19.00 | 7.60 | ಕೃಷ್ಣಾ | ಹೊಸ ಕಾಮಗಾರಿ | 14 | ಕೊಕಟನೂರ ಹಾಗೂ ಚಿಕ್ಕ ಸಿಂದಗಿ ಗ್ರಾಮಗಳಲ್ಲಿ ಅನುಕ್ರಮವಾಗಿ ಸ.ನಂ.103 ಹಾಗೂ ಸ.ನಂ.93/2ಜಮೀನುಗಳಲ್ಲಿ ತೆರೆದ ಬಾವಿಗಳನ್ನು ನಿರ್ಮಿಸಿ ಕೊಕಟನೂರಿನಲ್ಲಿ 645 ಮೀ.ಉದ್ದ, 140ಮಿ.ಮಿ ವ್ಯಾಸದ ಪಿವಿಸಿ ಏರು ಕೊಳವೆ ಮಾರ್ಗ, 9 ಹೆಚ್.ಪಿ. ಸಾಮರ್ಥ್ಯದಸೆಂಟ್ರಿಫ್ಯೂಗಲ್ ಪಂಪು ಹಾಗೂ ಚಿಕ್ಕ ಸಿಂದಗಿಯಲ್ಲಿ 135 ಮೀ. ಉದ್ದ, 140 ಮಿ.ಮಿ. ವ್ಯಾಸದ ಪಿವಿಸಿ ಏರು ಕೊಳವೆ, 6 ಹೆಚ್.ಪಿ. ಸಾಮರ್ಥ್ಯದ ಸೆಂಟ್ರಿಫ್ಯೂಗಲ್ ಪಂಪುಗಳನ್ನು ಹೊಂದಿರುವ ಪ್ರತ್ಯೇಕ ವ್ಯವಸ್ಥೆಯ ಏತ ನೀರಾವರಿ ಯೋಜನೆ ನಿರ್ಮಿಸಲು ಅವಕಾಶ ಮಾಡಿದೆ. |
| | ಆದೇಶ ಸಂಖ್ಯೆ ಸನೀಇ 98 ಅವಿಸಂ 2009, ದಿನಾಂಕ06.01.2010 ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಮಾಡಿರುವ ಅನುದಾನ | | | 7.40 | | | | | |
| | **ಒಟ್ಟು** | | 37.50 | 19.00 | 15.00 | | | | |
| **ಲೆಕ್ಕ ಶೀರ್ಷಿಕೆ ಒಟ್ಟು** | | | 109.50 | 91.00 | 43.80 | | | | |
| **4702-00-101-3-01-423 ಗಿರಿಜನ ಉಪ ಯೋಜನೆ-ಏತ ನೀರಾವರಿ ಯೋಜನೆಗಳು** | | | | | | | | | |
| 3 | ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ಕೊಣ್ಣೂರು (ಹುಣಸಿಕಟ್ಟಿ)ಗ್ರಾಮದ ಸ.ನಂ.54 ರಲ್ಲಿ ಏತ ನೀರಾವರಿ ಯೋಜನೆ ನಿರ್ಮಾಣ | | **49.70** | **30.00** | **12.00** | **ಕೃಷ್ಣಾ** | **ಹೊಸ ಕಾಮಗಾರಿ** | **12** | **10.80 ಕಿಮೀ. ಉದ್ದ, 140ಮಿಮಿ ವ್ಯಾಸದ ಪಿವಿಸಿ ಮಾದರಿಯ ಏರು ಕೊಳವೆ ಮಾರ್ಗ, 10ಹೆಚ್.ಪಿ. ಸಾಮರ್ಥ್ಯದ 4 ಸೆಂಟ್ರಿ ಫ್ಯೂಗಲ್ ಪಂಪುಗಳನ್ನು ಯೋಜನೆಯಲ್ಲಿ ಅಳವಡಿಸಿದೆ. ಶೇ.10 ರ ಬಡ್ಡಿ ದರದಲ್ಲಿ ಲಾಭ ವೆಚ್ಚದ ಅನುಪಾತ 1.37 ಆಗಿರುತ್ತದೆ.** |
| | ಆದೇಶ ಸಂಖ್ಯೆ ಸನೀಇ 229 ಮಸಾವಿ ದಿನಾಂಕ 09.12.2009 ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಮಾಡಿರುವ ಅನುದಾನ | | | | 7.88 | | | | |
| | **ಒಟ್ಟು** | | **49.70** | **30.00** | **19.88** | | | | |

| | | | | | | | | |
|---|---|---|---|---|---|---|---|---|
| 4 | ಬಾಗಲಕೋಟೆ ಜಿಲ್ಲೆ ಬೀಳಗಿ ತಾಲ್ಲೂಕಿನ ತೆಗ್ಗಿ ಸಿದ್ದಾಪುರ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ | 41.50 | 20.00 | 8.00 | ಕೃಷ್ಣಾ | ಹೊಸ ಕಾಮಗಾರಿ | 14.60 | 7.35 ಕಿ.ಮೀ. ಉದ್ದ, 140 ಮಿ.ಮಿ. ವ್ಯಾಸದ ಪಿವಿಸಿ ಮಾದರಿಯ ಏರು ಕೊಳವೆ ಮಾರ್ಗ, 10 ಹೆಚ್.ಪಿ. ಸಾಮರ್ಥ್ಯದ 3 ಸೆಂಟ್ರಿಫ್ಯೂಗಲ್ ಪಂಪುಗಳನ್ನು ಯೋಜನೆಯಲ್ಲಿ ಅಳವಡಿಸಿದೆ. ಶೇ.10ರ ದರದಲ್ಲಿ ಲಾಭ ವೆಚ್ಚದ ಅನುಪಾತ 6.18 ಆಗಿರುತ್ತದೆ. |
| | ಆದೇಶ ಸಂಖ್ಯೆ ಸನೀಇ 229 ಮಸಾವಿ 2009 ದಿನಾಂಕ 09.12.2009 ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಮಾಡಿರುವ ಅನುದಾನ | | | 8.60 | | | | |
| | ಒಟ್ಟು | 41.50 | 20.00 | 16.60 | | | | |
| 5 | ಬಾಗಲಕೋಟೆ ಜಿಲ್ಲೆ ಬೀಳಗಿ ತಾಲ್ಲೂಕಿನ ಬಿಸನಾಳ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ | 36.00 | 20.00 | 8.00 | ಕೃಷ್ಣಾ | ಹೊಸ ಕಾಮಗಾರಿ | 13 | 5.05 ಕಿಮೀ, ಉದ್ದ, 140ಮಿ.ಮಿ ವ್ಯಾಸದ ಪಿವಿಸಿ ಮಾದರಿಯ ಏರು ಕೊಳವೆ ಮಾರ್ಗ ಹಾಗೂ 2.49 ಕಿ.ಮೀ. ಉದ್ದದ ಗ್ರಾವಿಟಿ ಕೊಳವೆ ಮಾರ್ಗ, 10 ಹೆಚ್.ಪಿ. ಸಾಮರ್ಥ್ಯದ 2 ಸೆಂಟ್ರಿಫ್ಯೂಗಲ್ ಪಂಪುಗಳನ್ನು ಯೋಜನೆಯಲ್ಲಿ ಅಳವಡಿಸಿದೆ. ಶೆ.10ರ ದರದಲ್ಲಿ ಲಾಭ ವೆಚ್ಚದ ಅನುಪಾತ 6.196 ಆಗಿರುತ್ತದೆ. |
| | ಆದೇಶ ಸಂಖ್ಯೆ ಸನೀಇ 229 ಮಸಾವಿ 2009 ದಿನಾಂಕ 09.12.2009 ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಮಾಡಿರುವ ಅನುದಾನ | | | 6.40 | | | | |
| | ಒಟ್ಟು | 36.00 | 20.00 | 14.40 | | | | |
| | ಲೆಕ್ಕ ಶೀರ್ಷಿಕೆ ಒಟ್ಟು | 127.20 | 70.00 | 50.88 | | | | |
| | ಒಟ್ಟಾರೆ | 236.70 | 161.00 | 94.68 | | | | |

**( ಕೆ. ಸುಧಾಕರ ಶೆಟ್ಟಿ )**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ಮೈಸೂರು ಜಿಲ್ಲೆ, ಟಿ ನರಸೀಪುರ ತಾಲ್ಲೂಕು ತಲಕಾಡು ಹೋಬಳಿ, ಟಿ. ಬೆಟ್ಟಹಳ್ಳಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** 1. ಪತ್ರ ಸಂಖ್ಯೆ: ಸನೀಇ 96 ಭೂಸ್ವಾಪ್ರ 2007, ದಿನಾಂಕ 17/08/2007.
2. ಪತ್ರ ಸಂಖ್ಯೆ: ಮುಸನೀ(ದ)/ಲೆಶಾ/ಲೆಸ-1/3ಭೂಸ್ವಾಧೀನ/09-10/3456, ದಿನಾಂಕ 07/12/2009.

**ಪ್ರಸ್ತಾವನೆ:**

ಮೈಸೂರು ಜಿಲ್ಲೆ, ಟಿ.ನರಸೀಪುರ ತಾಲ್ಲೂಕು, ತಲಕಾಡು ಹೋಬಳಿ ಟಿ.ಬೆಟ್ಟಹಳ್ಳಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಟಿ.ನರಸೀಪುರ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.82,597-00 ಗಳನ್ನು ಪಾವತಿಸಬೇಕಾಗಿದ್ದು, ಇದರಲ್ಲಿ ರೂ.64,265-00ಗಳನ್ನು ಮೇಲೆ (1) ರಲ್ಲಿ ಓದಲಾದ ಪತ್ರದ ಸೂಚನೆಯಂತೆ ಸಾಮಾನ್ಯ ಹಣ ಭರವಸೆ ಪತ್ರದಿಂದ ಪಾವತಿಸಿರುತ್ತಾರೆ, ಇನ್ನುಳಿದ ರೂ.21,082-00 ಗಳಿಗೆ ಅನುದಾನ ಬಿಡುಗಡೆ ಮಾಡುವಂತೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 5 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 21 ನೇ ಜನವರಿ 2010.**

ಮೈಸೂರು ಜಿಲ್ಲೆ, ಟಿ.ನರಸೀಪುರ ತಾಲ್ಲೂಕು, ತಲಕಾಡು ಹೋಬಳಿ, ಟಿ.ಬೆಟ್ಟಹಳ್ಳಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಟಿ.ಬೆಟ್ಟಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿನ ಸೂಚನೆಗಳಂತೆ

ಲೆಕ್ಕಾಹಾಕಿದ ಪರಿಹಾರಧನದ ಬಾಕಿ ಮೊತ್ತ ರೂ.21,082–00 ಗಳನ್ನು (ಇಪ್ಪತ್ತೊಂದು ಸಾವಿರದ ಎಂಭತ್ತೆರಡು ರೂಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸುವುದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದು.

ಈ ವೆಚ್ಚವನ್ನು 2009–10 ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂ ಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.189

**(ಕೆ. ಸುಧಾಕರ ಶೆಟ್ಟಿ.)**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ ಮತ್ತು ತಾಲ್ಲೂಕಿನ ಶ್ರೀಮಂಡಲ ಗ್ರಾಮದ ಹತ್ತಿರ ನಿರ್ಮಿಸಲಾದ ಏತ ನೀರಾವರಿ ಯೋಜನೆಗಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಮುಂಗಡ ಹಣ ಠೇವಣಿಮಾಡುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 10/11/2009ರ ಪತ್ರ ಸಂ:ಸನೀ(ಉ)ವ/ಬಿಜಾ/ಭೂಸ್ವಾಪ್ರ/2009–10/ 6657.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 10/11/09 ರ ಪತ್ರದಲ್ಲಿ ಮುಖ್ಯ ಇಂಜಿನೀಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬೀದರ್ ಜಿಲ್ಲೆ ಮತ್ತು ತಾಲ್ಲೂಕಿನ ಶ್ರೀಮಂಡಲ ಗ್ರಾಮದ ಹತ್ತಿರ ನಿರ್ಮಿಸಿದ ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ 6–04ಎಕರೆ ಜಮೀನಿನ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಪ್ರತಿ ಎಕರೆಗೆ ರೂ.71,000/– ಗಳಂತೆ ಒಟ್ಟು ರೂ.4,33,100–00ಗಳನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣವಾಗಿ ಠೇವಣಿ ಮಾಡಲು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 42 ಭೂಸ್ವಾಹಾ 2000, ದಿನಾಂಕ 08/10/2001 ರಲ್ಲಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣ ಠೇವಣಿ ಮಾಡಲು ಸೂಚಿಸಲಾಗಿದೆ. ಅದರಂತೆ ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 164 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 20ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಮತ್ತು ತಾಲ್ಲೂಕಿನ ಶ್ರೀಮಂಡಲ ಗ್ರಾಮದ ಹತ್ತಿರ ನಿರ್ಮಿಸಿದ ಏತ ನೀರಾವರಿ ಯೋಜನೆಗಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಶ್ರೀಮಂಡಲ ಗ್ರಾಮದ ಸರ್ವೆ ನಂಬರ್‌ಗಳಿಗೆ ಸೇರಿದ ಒಟ್ಟು 6–04 ಎಕರೆ ಜಮೀನಿನ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಸಂಭವನೀಯ ಭೂಸ್ವಾಧೀನ ವೆಚ್ಚದ ಶೇ.50ರಷ್ಟು ಅಂದರೆ ರೂ.2,16,550–00 ಲಕ್ಷಗಳನ್ನು (ಎರಡು ಲಕ್ಷದ ಹದಿನಾರು ಸಾವಿರದ ಐನೂರ ಐವತ್ತು ರೂ.ಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣವಾಗಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.190

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಗಳೊಂದಿಗೆ ಮುಂದುವರಿಸುವ ಬಗ್ಗೆ

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 39 ಸಅಸೇ 2009, ದಿನಾಂಕ : 21–01–2009
2. ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆನಾಸ 325 ಇಭತ 2009, ದಿನಾಂಕ: 16–12–2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ : 01–01–2009 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾಗಿರುವ ದಿನಾಂಕ 16–12–2009 ರ ಅನಧಿಕೃತ ಟಿಪ್ಪಣಿಯಲ್ಲಿ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯು ಈ ಹುದ್ದೆಗಳನ್ನು ದಿನಾಂಕ : 01–01–2010 ರಿಂದ ಜಾರಿಗೆ ಬರುವಂತೆ ಮುಂದುವರಿಸುವಂತೆ ಕೋರಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 642 ಸಅಸೇ 2009, ಬೆಂಗಳೂರು, ದಿನಾಂಕ: 18ನೇ ಜನವರಿ 2010.**

ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ : 01–01–2010 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ.ಎಸ್. ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

ಪಿ.ಆರ್.201

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 57 ಎಸ್‌ಎಪಿ (ಎಸ್) 2008, ದಿನಾಂಕ: 21–01–2009
2. ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಕಂಇ 7 ವಿಕೋಆ 2009, ದಿನಾಂಕ: 21–12–2009

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 21–01–2009 ರ ಆದೇಶದಲ್ಲಿ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 31–12–2009 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿತ್ತು.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಅಧೀನ ಕಾರ್ಯದರ್ಶಿ (ವಿಶೇಷ ಕೋಶ) | 01 |

| | | |
|---|---|---|
| **2.** | ಹಿರಿಯ ಸಹಾಯಕ | 01 |
| 3. | ಸಹಾಯಕ | 01 |
| 4. | ಕಿರಿಯ ಸಹಾಯಕ | 01 |
| 5. | ಬೆರಳಚ್ಚುಗಾರರು | 01 |
| 6. | ದಲಾಯತ್ | 01 |
| 7. | ವಾಹನ ಚಾಲಕ | 01 |
| | **ಒಟ್ಟು ಹುದ್ದೆಗಳು** | **07** |

ಮೇಲೆ (2) ರಲ್ಲಿ ಓದಲಾದ ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿಯಲ್ಲಿ ಕಂದಾಯ ಇಲಾಖೆಯ ವಿಶೇಷ ಕೋಶದಲ್ಲಿರುವ 7 ಹುದ್ದೆಗಳನ್ನು ದಿನಾಂಕ : 01–01–2010 ರಿಂದ ಮತ್ತೆ ಒಂದು ವರ್ಷದ ಅವಧಿಯವರೆಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಲಾಗಿದೆ

**ಸರ್ಕಾರದ ಆದೇಶ ಸಂಖ್ಯೆ: ಸಂಖ್ಯೆ ಸಿಆಸುಇ 660 ಸಅಸೇ 2009, ಬೆಂಗಳೂರು, ದಿನಾಂಕ: 18ನೇ ಜನವರಿ 2010.**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ : 01–01–2010 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಅಧೀನ ಕಾರ್ಯದರ್ಶಿ (ವಿಶೇಷ ಕೋಶ) | 01 |
| **2.** | ಹಿರಿಯ ಸಹಾಯಕ | 01 |
| 3. | ಸಹಾಯಕ | 01 |
| 4. | ಕಿರಿಯ ಸಹಾಯಕ | 01 |
| 5. | ಬೆರಳಚ್ಚುಗಾರರು | 01 |
| 6. | ದಲಾಯತ್ | 01 |
| 7. | ವಾಹನ ಚಾಲಕ | 01 |
| | **ಒಟ್ಟು ಹುದ್ದೆಗಳು** | **07** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಎಸ್. ಶಿವರಾಮ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು–3)

ಪಿ.ಆರ್.202

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 460 ಸಅಸೇ 2007, ದಿನಾಂಕ 06–12–2007.

**2.** ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 193 ಸಮಯ 07, (ಭಾಗ), ದಿನಾಂಕ : 18–12–2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 15–11–2007 ರಿಂದ 1 ವರ್ಷದ ಅವಧಿಗೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಈ ಹುದ್ದೆಗಳನ್ನು ಆರ್ಥಿಕ ಇಲಾಖೆಯ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿನ ತಾತ್ಕಾಲಿಕ 3 ಹುದ್ದೆಗಳನ್ನು ಮತ್ತೆ 1 ವರ್ಷ ಮುಂದುವರಿಸುವಂತೆ ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| **1.** | ಪತ್ರಾಂಕಿತ ಆಪ್ತ ಸಹಾಯಕರು | 01 |
| **2.** | ಕಿರಿಯ ಸಹಾಯಕರು | 01 |
| 3. | ದಲಾಯತ್ | 01 |
| | **ಒಟ್ಟು ಹುದ್ದೆಗಳು** | **03** |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 64 ಸಅಸೇ 2009, ಬೆಂಗಳೂರು, ದಿನಾಂಕ: 18ನೇ ಜನವರಿ 2010.**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 05–11–2009 ರಿಂದ 04–11–2011 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| **1.** | ಪತ್ರಾಂಕಿತ ಆಪ್ತ ಸಹಾಯಕರು | 01 |
| **2.** | ಕಿರಿಯ ಸಹಾಯಕರು | 01 |
| 3. | ದಲಾಯತ್ | 01 |
| | **ಒಟ್ಟು ಹುದ್ದೆಗಳು** | **03** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ.ಎಸ್. ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

ಪಿ.ಆರ್.203

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ :** 1. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ ಡಿಪಿಎನ್.ಸಿಶಾ 1 : 69: 2009–10, ದಿನಾಂಕ 30–12–2009

**2.** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ) ಎಲ್–52/ಸಿಆರ್–5/2009/ ಹಾವೇರಿ ದಿನಾಂಕ : 05–12–2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 30–12–2009ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರವರ ಪತ್ರ ಮತ್ತು ಮೇಲೆ (2) ರಲ್ಲಿ ದಿನಾಂಕ: 05–12–2009ರ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರಗಳಲ್ಲಿ ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 5/2009ರ ಪ್ರಕರಣದಲ್ಲಿ ಆರೋಪಿಯಾಗಿರುವ ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ : 24–11–2009 ರಂದು ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಸ್ಪೆಷಲ್ ಕೇಸ್ ನಂ 6/2006ರ ಅಡಿಯಲ್ಲಿ ದಾಖಲಾದ ಪ್ರಕರಣದ ಫಿರ್ಯಾದುದಾರರಾದ ಶ್ರೀ ಶಾಂತಪ್ಪ

ಫಕ್ಕೀರಪ್ಪ ತಳವಾರ, ಕೆಂಗಾಪುರ, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ ಇವರಿಂದ ರೂ. 1,500– ಲಂಚವನ್ನು ಪಡೆಯುತ್ತಿದ್ದಾಗ ಹಾವೇರಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿರುವುದಾಗಿ ತಿಳಿಸಿರುತ್ತಾರೆ.

ಸದರಿ ಆರೋಪಿತ ಸರ್ಕಾರಿ ಅಧಿಕಾರಿಯವರ ಮೇಲೆ ಸದರಿ ಲೋಕಾಯುಕ್ತ ಪೊಲೀಸರು ಗುನ್ನೆ ನಂ. 5/2009. ಕಲಂ 7, 13(1)(ಡಿ) ಸಹವಾಚಕ 13(2) ಭ್ರಷ್ಟಾಚಾರ ನಿರೋಧ ಕಾಯಿದೆ 1988ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು, ಸದರಿ ಅಧಿಕಾರಿಯನ್ನು ದಸ್ತಗಿರಿ ಮಾಡಿ ತನಿಖೆ ನಡೆಸುತ್ತಿರುವುದಾಗಿ ತಿಳಿಸಿರುತ್ತಾರೆ. ಆದಕಾರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ)ರ ರೀತ್ಯಾ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ದಿನಾಂಕ: 24–11–2009 ರಿಂದ ಜಾರಿಗೆ ಬರುವಂತೆ ನಿಲಂಬನೆಯಲ್ಲಿಟ್ಟು ಆದೇಶ ಹೊರಡಿಸುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 496 ಪಿಪಿಇ 2009, ಬೆಂಗಳೂರು, ದಿನಾಂಕ: 21ನೇ ಜನವರಿ 2010.**

ಮೇಲೆ ವಿವರಿಸಿರುವಂತೆ ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ)ರ ಅನುಸಾರ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ದಿನಾಂಕ : 24–11–2009 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಸದರಿ ಅಧಿಕಾರಿಯವರು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1957ರ ನಿಯಮ 98ರ ಅನುಸಾರ ಅಮಾನತ್ತಿನ ಅವಧಿಯಲ್ಲಿ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ನೇಮಕಾತಿ ಪ್ರಾಧಿಕಾರಿ/ ಮೇಲಾಧಿಕಾರಿಯ ಪೂರ್ವಾನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ.ಸಿ. ಸಿದ್ದಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗ)

ಪಿ.ಆರ್.204

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಶೇಖರಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ದೇವದುರ್ಗ ಅವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ತೃಪ್ತಿಕರವೆಂದು ಘೋಷಿಸುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಆದೇಶ ಸಂಖ್ಯೆ: ಒಇ 845 ಪಿಪಿಇ 2005 ದಿನಾಂಕ : 03–05–2006
2. ನಿರ್ದೇಶಕರು, ಅಭಿಯೋಗ ಇಲಾಖೆ ಇವರ ಪತ್ರ ಸಂಖ್ಯೆ ಡಿಪಿಎನ್. ಸಿಶಾ 1.37 (16): 2008–09 ದಿನಾಂಕ 05–09–2009

**ಪ್ರಸ್ತಾವನೆ :**

ಶ್ರೀ ಶೇಖರಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ದೇವದುರ್ಗ, ಇವರ ಮೇಲೆ (1) ರಲ್ಲಿ ಓದಲಾದ ದಿನಾಂಕ: 03–05–2006ರ ಅಧಿಸೂಚನೆಯ ಕ್ರ.ಸಂ. 16 ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು ದಿನಾಂಕ 15–05–2006ರ ಪೂರ್ವಾಹ್ನದಿಂದ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ನಿಯಮಾನುಸಾರ ದಿನಾಂಕ : 14–05–2008 ರಂದು ಪೂರೈಸಬೇಕಾಗಿದ್ದು, ಸದರಿ ಅಧಿಕಾರಿಯವರು ನಿಗದಿತ ಅವಧಿಯೊಳಗೆ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗದಿರುವುದರಿಂದ, ದಿನಾಂಕ : 15–05–2008 ರಿಂದ 06–11–2008 ರವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಬೇಕೆಂದು ಕೋರಿದ್ದಾರೆ.

ಸದರಿ ಅಧಿಕಾರಿಯವರು ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ– 2ರಲ್ಲಿ ಉತ್ತೀರ್ಣರಾದ ಬಗ್ಗೆ ಪರೀಕ್ಷಾ ಫಲಿತಾಂಶವನ್ನು ದಿನಾಂಕ 6–11–2008ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಇವರು ಎಸ್‌ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07, 2007–08 ಮತ್ತು 2008–09ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸಧ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀ ಶೇಖರಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ದೇವದುರ್ಗ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4ರ ಉಪನಿಯಮ 1(i)ರ ಪ್ರಕಾರ, ದಿನಾಂಕ: 15–05–2008 ರಿಂದ 06–11–2008 ರವರೆಗೆ ವಿಸ್ತರಿಸಿ, ಸದರಿ ನಿಯಮಾವಳಿಯ ನಿಯಮ 5(1)(ಎ)ರ ಅನುಸಾರ ದಿನಾಂಕ : 07–11–2008 ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 05–09–2009ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 398 ಪಿಪಿಇ 2009, ಬೆಂಗಳೂರು, ದಿನಾಂಕ: 21ನೇ ಜನವರಿ 2010.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರಿಕ ಸೇವೆಗಳ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4ರ ಉಪನಿಯಮ 1(i)ರ ಪ್ರಕಾರ, ದಿನಾಂಕ: 15–05–2008 ರಿಂದ 06–11–2008 ರವರೆಗೆ ವಿಸ್ತರಿಸಿ, ಸದರಿ ನಿಯಮಾವಳಿಯ ನಿಯಮ 5(1)(ಎ)ರ ಅನುಸಾರ ಶ್ರೀ ಶೇಖರಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ದೇವದುರ್ಗ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 07–11–2008 ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ.ಸಿ. ಸಿದ್ದಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗ)

ಪಿ.ಆರ್.205

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ರಾಜೇಶ್ವರ ಎಸ್.ಶೆಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಆನೇಕಲ್ ಅವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ: ಒಇ 845 ಪಿಪಿಇ 2005 ದಿನಾಂಕ : 03–05–2006
2. ಸರ್ಕಾರದ ಆದೇಶ ಸಂಖ್ಯೆ: ಒಇ 386 ಪಿಪಿಇ 2008 ದಿನಾಂಕ : 22–10–2008
3. ನಿರ್ದೇಶಕರು, ಅಭಿಯೋಗ ಇಲಾಖೆ ಇವರ ಪತ್ರ ಸಂಖ್ಯೆ ಡಿಪಿಎನ್. ಸಿಶಾ 1.37 (21): 2008–09 ದಿನಾಂಕ 02–09–2009

**ಪ್ರಸ್ತಾವನೆ :**

ಶ್ರೀ ರಾಜೇಶ್ವರ ಎಸ್.ಶೆಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಆನೇಕಲ್ ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ 03–05–2006ರ (ಕ್ರ.ಸಂ.21) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು ದಿನಾಂಕ 15–05–2006ರ ಪೂರ್ವಾಹ್ನದಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ.

ಸದರಿ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ನಿಯಮಾನುಸಾರ ದಿನಾಂಕ 14–05–2008 ರಂದು ಪೂರೈಸಬೇಕಾಗಿದ್ದು, ಸದರಿ ಅಧಿಕಾರಿಯ ಹುದ್ದೆಗೆ ನಿಗಧಿಪಡಿಸಲಾಗಿದ್ದ ಪರೀಕ್ಷೆಗಳಲ್ಲೊಂದಾದ ಅಕೌಂಟ್ಸ್

ಹೈಯರ್ ಪರೀಕ್ಷೆಯನ್ನು ಪಾಸು ಮಾಡದೆ ಇದ್ದುದರಿಂದ, ಪರಿವೀಕ್ಷಣಾ ಅವಧಿಯನ್ನು ದಿನಾಂಕ : 15–05–2008 ರಿಂದ 15–11–2008 ರವರೆಗೆ ಮೇಲೆ ಓದಲಾಗಿರುವ (2)ರ ಆದೇಶದಲ್ಲಿ ವಿಸ್ತರಿಸಲಾಗಿದೆ.

ಸದರಿ ಅಧಿಕಾರಿಯವರಿಗೆ ನಿಗದಿತ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ –2 ರಲ್ಲಿ ಅಂತಿಮವಾಗಿ ಉತ್ತೀರ್ಣರಾದ ಬಗ್ಗೆ ಪರೀಕ್ಷಾ ಫಲಿತಾಂಶವನ್ನು ದಿನಾಂಕ : 6–11–2008ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಇವರು ಎಸ್‌ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07, 2007–08 ಮತ್ತು 2008–09ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸಧ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀ ರಾಜೇಶ್ವರ ಎಸ್. ಶೆಟ್ಟಿ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಆನೇಕಲ್ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) (ಎ)ರ ಅನುಸಾರ, ದಿನಾಂಕ: 07–11–2008 ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (3)ರ ಪತ್ರ ದಿನಾಂಕ: 02–09–2009ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 399 ಪಿಪಿಇ 2009, ಬೆಂಗಳೂರು, ದಿನಾಂಕ: 19ನೇ ಜನವರಿ 2010.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರಿಕ ಸೇವೆಗಳ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)(ಎ)ರ ಅನುಸಾರ ಶ್ರೀ ರಾಜೇಶ್ವರ ಎಸ್. ಶೆಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಆನೇಕಲ್ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 07-11–2008 ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ.ಸಿ. ಸಿದ್ದಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗ)

ಪಿ.ಆರ್.206

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಬಿ. ಹಾವೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಬೆಳಗಾವಿ ಇವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಯ ಮಂಡನಾಧಿಕಾರಿಯ ಬದಲಾವಣೆ ಕುರಿತು.

**ಉಲ್ಲೇಖ :** 1. ಸರ್ಕಾರದ ಆದೇಶ ಸಂಖ್ಯೆ: ಒಇ 414 ಪಿಪಿಇ 2007 ದಿನಾಂಕ : 9–03–2009

**2.** ಕಾನೂನು ಇಲಾಖೆಯ ಟಿಪ್ಪಣಿ ಸಂ. ಲಾ 5 ಜದಿವಿ 2008, ದಿನಾಂಕ : 23–11–2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 09–03–2009ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ಬಿ. ಹಾವೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಬೆಳಗಾವಿರವರ ಜನ್ಮ ದಿನಾಂಕವನ್ನು ತಿದ್ದುಪಡಿ ಮಾಡುವ ಕುರಿತು ಪ್ರಕರಣದ ವಿಚಾರಣೆಯಲ್ಲಿ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು ಶ್ರೀ ಜಿ.ಎ. ಮೂಲಿಮನಿ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಕಾನೂನು ಇಲಾಖೆಯ ದಿನಾಂಕ : 23–11–2009ರ ಟಿಪ್ಪಣಿಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಯನ್ವಯ ಶ್ರೀ ಜಿ.ಎ. ಮೂಲಿಮನಿರವರು ವರ್ಗಾವಣೆಗೊಂಡಿರುವುದರಿಂದ ಕಾನೂನು ಇಲಾಖೆಯ ಮತ್ತೊಬ್ಬ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ವಿಚಾರಣಾಧಿಕಾರಿಯು ಸೂಚಿಸಿರುತ್ತಾರೆ.

ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರೊಡನೆ ಸಮಾಲೋಚಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 414 ಪಿಪಿಇ 2007, ಬೆಂಗಳೂರು, ದಿನಾಂಕ: 19ನೇ ಜನವರಿ 2010.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಎಸ್.ಬಿ. ಹಾವೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಬೆಳಗಾವಿ ಇವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಗೆ ಶ್ರೀ ಜಿ.ಎ. ಮೂಲಿಮನಿರವರ ಸ್ಥಾನದಲ್ಲಿ ಶ್ರೀ ಶ್ರೀಧರ್ ಗೋಪಾಲ ಕೃಷ್ಣಭಟ್, ಸರ್ಕಾರದ ಅಧೀನ ಕಾರ್ಯದರ್ಶಿ(ವ್ಯಾಜ್ಯಗಳು) ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.207

**(ಕೆ.ಸಿ. ಸಿದ್ದಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗಗಳು)

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** "ಪರಿಸರ ಸಂರಕ್ಷಣಾ ಶುಲ್ಕ" ಪಾವತಿಯಿಂದ ವಿನಾಯಿತಿ ನೀಡುವ ಬಗ್ಗೆ

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಅಪಜೀ 25 ಇಎನ್‌ಜಿ 2008, ದಿನಾಂಕ : 04–02–2009.

2. ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ : ಗಭೂಇ/ಕಗಗು/ಇ.ಪಿ.ಎಫ್./2009–10 ದಿನಾಂಕ : 23–9–2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ 1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಲ್ಲು ಗಣಿಗಾರಿಕೆಗಳಿಂದ ಪರಿಸರದ ಮೇಲಾಗುವ ದುಷ್ಪರಿಣಾಮವನ್ನು ತಡೆಗಟ್ಟಲು ಪ್ರತಿ ಹೆಕ್ಟೇರಿಗೆ ರೂ. 84,000/– ದಂತೆ ಪರಿಸರ ಸಂರಕ್ಷಣಾ ಶುಲ್ಕವನ್ನು ವಿಧಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ 2 ರಲ್ಲಿ ಓದಲಾದ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಕಲ್ಲು ಗಣಿಗಾರಿಕೆಯನ್ನು ಕುಲಕಸುಬಾಗಿ ಮಾಡುತ್ತಿರುವ ಬೋವಿ ಮತ್ತು ಇತರೆ ಹಿಂದುಳಿದ ಜನಾಂಗಗಳಿಗೆ ಆದ್ಯತೆ ಮೇರೆಗೆ ಕಲ್ಲು ಗಣಿ ಗುತ್ತಿಗೆಗಳನ್ನು ಮಾಡಲು ಮಂಜೂರಾತಿ ನೀಡಲಾಗಿದೆ ಎಂದು ತಿಳಿಸಿ ನಿರ್ದಿಷ್ಟವಲ್ಲದ ಉಪ ಖನಿಜಗಳು ರಾಜ್ಯ ಅಭಿವೃದ್ಧಿ ಕಾಮಗಾರಿಗಳ ಮತ್ತು ಕಟ್ಟಡಗಳ ನಿರ್ಮಾಣಕ್ಕೆ ಉಪಯೋಗವಾಗುತ್ತಿರುವುದರಿಂದ, ಕೆಲವು ಕಲ್ಲು ಗಣಿ ಗುತ್ತಿಗೆಗಳನ್ನು ಪಟ್ಟಾ ಭೂಮಿಯಲ್ಲಿ ಮಾಡಲು ಮಂಜೂರಾತಿ ನೀಡಲಾಗಿದೆ ಎಂದು ಹಾಗೂ ಕಲ್ಲು ಗಣಿಗಾರಿಕೆಯನ್ನು ಕುಲಕಸುಬಾಗಿ ಮಾಡುತ್ತಿರುವ ಬೋವಿ ಮತ್ತು ಇತರೆ ಹಿಂದುಳಿದ ಜನಾಂಗಗಳಿಗೆ ನಿರ್ದಿಷ್ಟವಲ್ಲದ ಉಪ ಖನಿಜಗಳಿಗೆ ವಿಧಿಸಿರುವ ಪರಿಸರ ಸಂರಕ್ಷಣೆ ಶುಲ್ಕವನ್ನು ತೆಗೆದುಹಾಕಬೇಕೆಂದು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 25 ಇಎನ್‌ಜಿ 2008, ಬೆಂಗಳೂರು, ದಿನಾಂಕ: 7–1–2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನಿರ್ದಿಷ್ಟವಲ್ಲದ ಉಪ ಖನಿಜಗಳಡಿಯಲ್ಲಿ ಕಟ್ಟಡಗಳು, ರಸ್ತೆ ಮತ್ತು ಅಭಿವೃದ್ಧಿ ಕಾಮಗಾರಿಗಳಿಗೆ ಬಳಸುವ ಕಲ್ಲು ಮತ್ತು ಜಲ್ಲಿಗಳನ್ನು ಹೊರತುಪಡಿಸಿ, ಸಾಧಾರಣ ಮರಳು, ಮುರ್‍ರಂ ಮತ್ತು ಇಟ್ಟಿಗೆ ಮಣ್ಣು ಇವುಗಳಿಗೆ "ಪರಿಸರ ಸಂರಕ್ಷಣಾ ಶುಲ್ಕ" ಪಾವತಿಯಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–7–1996ರಲ್ಲಿ ಕಾರ್ಯದರ್ಶಿಗಳಿಗೆ ಪ್ರದತ್ತ ಮಾಡಿರುವ ಅಧಿಕಾರದ ಪ್ರತ್ಯಾಯೋಜನೆಯ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 236

**(ಬಿ. ಮನೋಹರ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ಆರ್ಥಿಕ ಸಚಿವಾಲಯ**

**ವಿಷಯ :** ನೂತನ ಜಿಲ್ಲೆ ಯಾದ್‌ಗೀರ್‌ನಲ್ಲಿ ಜಿಲ್ಲಾ ಖಜಾನೆಯನ್ನು ಸ್ಥಾಪಿಸುವ ಕುರಿತು

**ಓದಲಾಗಿದೆ :** 1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಕಂಇ 59 ಭೂದಾಮ 2008, ದಿನಾಂಕ : 15-9-2009.
2. ಖಜಾನೆ ನಿರ್ದೇಶಕರ ಪತ್ರ ಸಂಖ್ಯೆ : ಖನಿ/ಪ್ರಕ್ರಿಯೆ/36/2009-10 ದಿನಾಂಕ : 28-10-2009.

**ಪ್ರಸ್ತಾವನೆ :**

ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಇವರು ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವು ಕ್ರಮ ಸಂ : (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಸರಹದ್ದನ್ನು ವಿಭಜಿಸಿ ಯಾದ್‌ಗೀರ್, ಷಹಾಪುರ, ಶೋರಾಪುರ ತಾಲ್ಲೂಕುಗಳನ್ನೊಳಗೊಂಡ ಯಾದ್‌ಗೀರ್ ನೂತನ ಜಿಲ್ಲೆಯನ್ನು ರಚಿಸಿದೆ. ಅದರಂತೆ ಈ ನೂತನ ಜಿಲ್ಲೆಯಲ್ಲಿ ಜಿಲ್ಲಾ ಖಜಾನೆಯನ್ನು ಪ್ರಾರಂಭಿಸಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ ಪ್ರಸ್ತಾವವನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 295 ರಾಲೆಪ 2009, ಬೆಂಗಳೂರು, ದಿನಾಂಕ: 06ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹೊಸದಾಗಿ ರಚನೆಯಾದ ಯಾದ್‌ಗೀರ್ ಜಿಲ್ಲೆಗೆ ಜಿಲ್ಲಾ ಖಜಾನೆಯನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ. ಈ ಜಿಲ್ಲೆಯ ವ್ಯಾಪ್ತಿಗೆ ಒಳಪಡುವ ಇತರೆ ಎಲ್ಲಾ ಸರ್ಕಾರಿ ಜಿಲ್ಲಾ ಕಚೇರಿಗಳಿಗೆ ಅಗತ್ಯವಾದ ಹಣಕಾಸಿನ ವ್ಯವಹಾರಗಳು ಅಂದರೆ ಸಿಬ್ಬಂದಿಗಳ ವೇತನ, ಇತರೆ ಭತ್ಯೆಗಳು ಮತ್ತು ಇನ್ನಿತರ ಹಣಕಾಸಿನ ವ್ಯವಹಾರಗಳನ್ನು ಯಾದ್‌ಗೀರ್ ಉಪ ಖಜಾನೆಯಲ್ಲಿ ವರ್ಷಾಂತ್ಯದವರೆಗೆ ಅಂದರೆ ದಿನಾಂಕ : 31-3-2010 ರವರೆಗೆ ನಡೆಸಲು ಹಾಗೂ ದಿನಾಂಕ : 1-4-2010ರ ನಂತರ ಯಾದಗೀರ್ ಜಿಲ್ಲಾ ಖಜಾನೆಯಿಂದ ಅಧಿಕೃತವಾಗಿ ಹಣಕಾಸಿನ ವ್ಯವಹಾರವನ್ನು ನಡೆಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 237

**(ಎನ್. ಶ್ರೀನಿವಾಸ ಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಆದೇಶ**

ಸಂಖ್ಯೆ : ಇಡಿ 216 ಯೋಸಕ 2009 (ಭಾಗ), ಬೆಂಗಳೂರು, ದಿನಾಂಕ : 15-1-2010

**ವಿಷಯ :** ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ದುರಸ್ತಿ ಹಾಗೂ ಕಟ್ಟಡ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ ಮಾಡಿದ ತಿದ್ದುಪಡಿ ಆದೇಶಕ್ಕೆ ತಿದ್ದುಪಡಿ ಮಾಡುವ ಬಗ್ಗೆ.

**ಉಲ್ಲೇಖ :** ದಿನಾಂಕ : 9-12-2009 ರ ಆದೇಶ ಸಂಖ್ಯೆ : ಇಡಿ 216 ಯೋಸಕ 2009.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ತಿದ್ದುಪಡಿ ಆದೇಶದ ಕ್ರಮ ಸಂಖ್ಯೆ (5) ರಲ್ಲಿನ ಜಿಲ್ಲಾ ಪಂಚಾಯತ್ ಅನುದಾನವನ್ನು ನೇರವಾಗಿ ಸಂಬಂಧಿಸಿದ ಶಾಲಾಭಿವೃದ್ಧಿ ಸಮಿತಿಗಳಿಗೆ ಬಿಡುಗಡೆ ಮಾಡತಕ್ಕದ್ದು.

**ಎಂಬುದಕ್ಕೆ ಬದಲಾಗಿ**

ಅನುದಾನವನ್ನು ಆಯಾ ಜಿಲ್ಲೆಯ ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆಗೆ ರವರಿಗೆ ಬಿಡುಗಡೆ ಮಾಡಿ ಆ ಮೊತ್ತವನ್ನು ಪೇಯಿಸ್ ರೆಸಿಪ್ಟ್ ಮೂಲಕ ಸೆಳೆದು ಸಂಬಂಧಿಸಿದ ಶಾಲೆಗಳ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳಿಗೆ ನೇರವಾಗಿ ಬಿಡುಗಡೆ ಮಾಡತಕ್ಕದ್ದು.

**ಎಂದು ತಿದ್ದಿ ಓದಿಕೊಳ್ಳತಕ್ಕದ್ದು.**

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 238

(ಐ.ಎಫ್. ಮಾಗಿ)
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ(ಯೋಜನೆ)

## ಕೃಷಿ ಸಚಿವಾಲಯ

**ವಿಷಯ :** ಶ್ರೀ ಜಿ.ಆರ್. ಖುದಾನಪೂರ, ಆಡಳಿತಾಧಿಕಾರಿಗಳು, ಜಂಟಿ ಕೃಷಿ ನಿರ್ದೇಶಕರ ಕಚೇರಿ, ಗುಲ್ಬರ್ಗಾ, ಇವರಿಗೆ ಸ್ವ ಇಚ್ಛಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ :** 1. ಕೃಷಿ ಆಯುಕ್ತರ ಪತ್ರ ಸಂಖ್ಯೆ : ಕೃಷಿಪ–6/28/ಖು/ಸನಿ/20/2009–10, ದಿನಾಂಕ : 3–12–2009.

**ಪ್ರಸ್ತಾವನೆ :**

ಮೇಲೆ ಓದಲಾದ– (1)ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಶ್ರೀ ಜಿ.ಆರ್. ಖುದಾನಪೂರ, ಆಡಳಿತಾಧಿಕಾರಿ, ಜಂಟಿ ಕೃಷಿ ನಿರ್ದೇಶಕರು, ಗುಲ್ಬರ್ಗಾ, ಇವರು ಕೌಟುಂಬಿಕ ಕಾರಣಗಳಿಂದಾಗಿ ಸ್ವಯಂ ನಿವೃತ್ತಿ ಹೊಂದಲು ಅನುಮತಿ ಕೋರಿ ಸಲ್ಲಿಸಿರುವ ದಿನಾಂಕ : 16–6–2009ರ ಮನವಿಯೊಂದಿಗೆ ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವಾದ್ದರಿಂದ ಬಾಕಿ/ಬೇಬಾಕಿ ಪತ್ರಗಳ ನಿರೀಕ್ಷಣಾ ಷರತ್ತುಗಳಿಗೊಳಪಟ್ಟು ದಿನಾಂಕ : 31–1–2010 ರಿಂದ ಅನ್ವಯಿಸುವಂತೆ ಸ್ವ–ಇಚ್ಛಾ ನಿವೃತ್ತಿಗೆ ಅನುಮತಿ ನೀಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 281 ಕೃಪಸೇ 2009, ಬೆಂಗಳೂರು, ದಿನಾಂಕ: 11–1–2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಜಿ.ಆರ್. ಖುದಾನಪೂರ, ಆಡಳಿತಾಧಿಕಾರಿಗಳು ಇವರಿಗೆ ಅವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಅದನ್ನು ಅವರಿಗೆ ನೀಡಬೇಕಾದ ನಿವೃತ್ತಿ ಸವಲತ್ತುಗಳಿಂದ ವಸೂಲಿ ಮಾಡುವ ಷರತ್ತಿಗೊಳಪಟ್ಟು ದಿನಾಂಕ : 31–1–2010 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಾಮಾವಳಿ 1958ರ ನಿಯಮ 285(1) (ಬಿ) ಅನ್ವಯ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 239

**(ಜಿ. ಕೆ. ಗುರಾಣಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಕುಮಾರಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ನೇಮಿಸಿರುವ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಇ 10 ಸಸಂನೋ 2009, ದಿನಾಂಕ : 10–7–2009.

2. ಆಡಳಿತಾಧಿಕಾರಿಗಳು, ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಕುಮಾರಕೃಪಾ ರಸ್ತೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಚಿಕಪ/07/2009/536, ದಿನಾಂಕ : 4–12–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ಸರ್ಕಾರದ ದಿನಾಂಕ :10–7–2009ರ ಆದೇಶದಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಕುಮಾರಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಕೆ. ಶಂಕರಲಿಂಗೇಗೌಡ, ಭಾ.ಆ.ಸೇ. ಸರ್ಕಾರದ ಕಾರ್ಯದರ್ಶಿ, ಸಾರಿಗೆ ಇಲಾಖೆ, ಬಹುಮಹಡಿಗಳ ಕಟ್ಟಡ, ಡಾ॥ ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ಆರು ತಿಂಗಳ ಅವಧಿಗೆ ಅಥವಾ

ಸದರಿ ಸಂಸ್ಥೆಯ ಹಾಲಿ ಇರುವ ಸದಸ್ಯರಿಂದ ಸಂಘಕ್ಕೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2) ರ ದಿನಾಂಕ : 4–12–2009 ರ ಪತ್ರದಲ್ಲಿ, ಆಡಳಿತಾಧಿಕಾರಿಗಳು, ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಕುಮಾರಕೃಪಾ ರಸ್ತೆ, ಬೆಂಗಳೂರು ರವರು ಚಿತ್ರಕಲಾ ಪರಿಷತ್ತಿನ ಸೇವಾ ನಿಯಮಗಳ (ಸಿ. ಅಂಡ್ ಆರ್.) ನಿಯಮಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ : ಸಇ 19 ಸಿಎಸ್ಆರ್ 2008 ದಿನಾಂಕ : 9–11–2009 ರನ್ವಯ ಅನುಮೋದಿಸಲಾಗಿದ್ದು, ಈ ಸೇವಾ ನಿಯಮಗಳನ್ನು ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಂದ ಅನುಮೋದಿಸಿದ ನಂತರವಷ್ಟೇ ಅನುಷ್ಠಾನಗೊಳಿಸಲು ಆದೇಶಿಸಿದ್ದು ಹಾಗೂ ಈ ಬಗ್ಗೆ ಈಗಾಗಲೇ ಜಿಲ್ಲಾ ನೋಂದಣಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಿರುವುದಾಗಿ ತಿಳಿಸುತ್ತಾ, ಸಂಸ್ಥೆಯ ಚುನಾಯಿತ ಆಡಳಿತ ಮಂಡಳಿಯು ಈ ಹಿಂದೆ ಕಾರ್ಯ ನಿರ್ವಹಿಸಿದ ದಿನಾಂಕ : 12–11–2007 ರಿಂದ ದಿನಾಂಕ : 9–7–2009ರ ಅವಧಿಯಲ್ಲಿ 7 ಆರೋಪಗಳು ಸಾಬೀತಾಗಿರುವುದು ಆದೇಶದಲ್ಲಿ ತಿಳಿಸಿರುವುದರಿಂದ, ಈ ಬಗ್ಗೆ ಆಡಳಿತ ಮಂಡಳಿಯಲ್ಲಿ ಅವಧಿಯಲ್ಲಿರುವ ಲೆಕ್ಕಪತ್ರಗಳ ಕುರಿತು ವಿಶೇಷ ಲೆಕ್ಕ ಪರಿಶೋಧನೆ ಮಾಡಲು ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರನ್ನು ಕೋರಲಾಗಿದ್ದು, ಸದರಿ ಅವಧಿಯ ಲೆಕ್ಕಪತ್ರದ ಪರಿಶೋಧನಾ ಕಾರ್ಯ ಕೈಗೊಳ್ಳಲು ಸಿಬ್ಬಂದಿಯವರನ್ನು ನಿಯೋಜಿಸಲಾಗಿದ್ದು, ಅವರಿಂದ ವರದಿ ಬಂದ ನಂತರ ನಿರ್ದಿಷ್ಟವಾಗಿ ಕ್ರಮ ಕೈಗೊಳ್ಳಬಹುದಾಗಿದೆ. ಎಂದು ಹಾಗೂ ಈ ಎಲ್ಲಾ ವಿಷಯಗಳ ಬಗ್ಗೆ ಕ್ರಮ ಕೈಗೊಳ್ಳಲು ಸೂಕ್ತ ಕಾಲಾವಕಾಶದ ಅವಶ್ಯಕತೆ ಇರುವುದರಿಂದ, ಪ್ರಸ್ತುತ ಹಾಲಿ ಆಡಳಿತಾಧಿಕಾರಿಗಳ ಅವಧಿಯು ದಿನಾಂಕ : 9–1–2010 ಕ್ಕೆ ಕೊನೆಗೊಳ್ಳಲಿದ್ದು, ಆಡಳಿತಾಧಿಕಾರಿಗಳ ಅವಧಿಯನ್ನು ಒಂದು ವರ್ಷದ ಅವಧಿಗೆ ವಿಸ್ತರಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 10 ಸಸಂನೋ 2009,**

**ಬೆಂಗಳೂರು, ದಿನಾಂಕ: 16–1–2010.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಕುಮಾರಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಶ್ರೀ ಎಂ.ಕೆ. ಶಂಕರಲಿಂಗೇಗೌಡ, ಭಾ.ಆ.ಸೇ., ಸರ್ಕಾರದ ಕಾರ್ಯದರ್ಶಿ, ಸಾರಿಗೆ ಇಲಾಖೆ, ಬಹುಮಹಡಿಗಳ ಕಟ್ಟಡ, ಡಾ॥ ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು560001 ಇವರ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ : 10–1–2010 ರಿಂದ ಆರು (6) ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 240

**(ನಂಜುಂಡಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ